— ಬಸವ —

# ಶ್ರೀಮದಲ್ಲಮವ್ಯೋಮ



ಸಿದ್ಧರಾಮಪ್ಪ ದುಂಡಪ್ಪ ಪಾವಟೆ
B.A., LL.B.,

ರಚಿಸಿದುದು.

ಗ್ರಂಥಕರ್ತನೆ ಪ್ರಕಟಿಸಿದುದು.



ಧಾರವಾಡ ಶ್ರೀ ತೋಂಟದ ಸಿದ್ಧಲಿಂಗ ವಿಜಯ
ಮುದ್ರಣಾಲಯದಲ್ಲಿ ಅಚ್ಚಾಯಿತು.



ಶಕೆ ೧೮೫೬ ಮಾಘ ಶುಕ್ಲ ೮ ಗುರುವಾರ.

ಕ್ರಿಸ್ತಾಬ್ದ ೧೯೩೫

---

ಬೆಲೆ ೧ ರೂಪಾಯಿ.

CC-0. Jangamwadi Math Collection. Digitized by eGangotri

ಚಿಂಣನಾಗಿಯೆ ನೊಸಲುಗಂಣನ ।
ಸುಂಣಿತಪ ಸದ್ಭಕ್ತಿ ಸರಣಿಯು ।
ಬಂಣಿಸುವ ಬಗೆಯಲ್ಲ ನಿೂರಪೆ ಸತ್ಯದಲಿ ಸುಳಿದು ॥
ಉಂಣದಗದವ ಯೋಗಿಪದಜಲ ।
ವಂಣಿಸುತ ಸೇವಿಸುತ ಶಿಶುವೂ ।
ಚಂಣಸಲ್ಲಮನಡಿಯೊಳಾಗಿರಲವನದೇನೆನಹು ॥

CC-0. Jangamwadi Math Collection. Digitized by eGangotri




ಶ್ರೀ ವೀರಶೈವ ಧರ್ಮದ ಋಷಿಗಳಾದ ಶ್ರೀಮದ್ಬಸವಾದಿಗಳ ಅಂತರ್ಯಾಮಿಸ್ವರೂಪನಪ್ಪ ಅಲ್ಲಮನ ತತ್ತ್ವಗಳ ಅಲ್ಪ ವಿವರಣವಿದು. ಅವನ ಚಾರಿತ್ರದ ಒಂದು ಅತ್ಯಲ್ಪವಾದ ಅಂಶವು.

ಕಾಲಕ್ರಮದ ಮಾಲಿನ್ಯದಿಂದೊದಗಿದ ನಮ್ಮೀ ಸಮಾಜದ ಒಂದಲ್ಲ ಎರಡಲ್ಲವಾದ ಒಡಕುಗಳನ್ನು ಮಾಯಿಸಿ ಒಕ್ಕಟ್ಟನ್ನು ಬೆಳೆಯಿಸಲು ಈ ಸಣ್ಣ ನಿಬಂಧವು ಸಾಹಾಯಕವನ್ನುಂಟು ಮಾಡಿದರೆ ನನ್ನ ಶ್ರಮವು ಸಾರ್ಥಕವು.

ಶ್ರೀ ಮದಲ್ಲಮಬಸವಚೆನ್ನಬಸವಾದಿಗಳ ವಚನವೇದವನ್ನು ತಿಳುಕೊಳ್ಳಬೇಕೆಂಬ ಲಾಲಸೆಯುಂಟಾದುದೆ ಲಿಂಗಾಯತ ಸಮಾಜದ ಪುನರುಜ್ಜೀವನ ಚಿಹ್ನವು.

ಪೂರ್ವದ ದುರ್ವಾಸಸ್ತ್ಯಾಗಸ್ತ್ಯಾದಿಗಳು ನಡೆದ ವೀರಶೈವ ತತ್ತ್ವಗಳನ್ನೆ ಶರಣರು ಸೋಸಿ ನಮಗರುಹಿದರೆಂಬ ಜ್ಞಾನವೇ ವೀರಶೈವ ಧರ್ಮದ ಸನಾತನತ್ವದ ಪರಿಚಯವು.

ವೀರಶೈವರಲ್ಲಿ ಬಣಜಿಗರು, ಅವರಲ್ಲದವರು; ಸಾದರು, ಅವರಲ್ಲದವರು; ಜಂಗಮರು, ಅವರಲ್ಲದವರು; ಎಂಬಿವೆ ಮೊದಲಾದ ಪಂಗಡಗಳು ಸನಾತನ ಧರ್ಮಕ್ಕೆ ಸಲ್ಲವೆಂಬರಿಕೆಯಾದುದೆ ಅಷ್ಟಾವರಣದ ಗುರುತು.

ಪಂಚಾಚಾರಗಳೂ ಅಷ್ಟಾವರಣಗಳೂ ಲಿಂಗಾಯತ ಧರ್ಮ ಜೀವಿತವೆಂದು ತಿಳಿಯದೆ ಹಲವು ಸಂಸ್ಥೆಗಳಲ್ಲಿ ಬೋಧವಾಗಹತ್ತಿರುವ ಪ್ರಾಕೃತ ಜಾತಿ ಪ್ರಧಾನತ್ವವು ಹಿಂದೆ ಬೀಳುವುದೆ ಈ ಸಮಾಜದ ಮುಂದು ವರಿತವು.

ಶರಣರ ಉದಾತ್ತ ತತ್ತ್ವಗಳನ್ನರಿತು ಈಗಿನ ಪಾಶ್ಚಾತ್ಯ ವಿದ್ಯಾಭೂಷಿತರಾದ ವೀರಶೈವತರುಣರು ಆ ತತ್ತ್ವಗಳನ್ನು ಹೊಸತಾದ ಪರಿಸ್ಥಿತಿಗೆ ಅನುಗುಣವಾಗಿ ನಡೆಯಿಸಲನುವಾದುದೆ ನಿಜವಾದ ವಿದ್ಯಾಸಂಸ್ಕೃತಿಯು.

CC-0. Jangamwadi Math Collection. Digitized by eGangotri

ಇದನ್ನೆಲ್ಲ ತಿಳುಹಿಸಲಿಕ್ಕೆ ಈ ಪುಟ್ಟ ಪುಸ್ತಕವು ಅಲ್ಪಾಂಶದಲ್ಲಿಯಾದರು ಹೇತುವಾದರೆ ನನ್ನ ಕೃತಾರ್ಥತೆಯು.

ಜೀವೋದ್ಭಾವಿತ ದೋಷಷಂಡಮಚಿರಾನ್ನೀತ್ವಾಂತಮುಜ್ಝಜ್ಝವಾ ।
ವಾತ್ಮನ್ಯಂಬರಸಂಭರೇ ಯಮಿಮನಃಸೂಕ್ಷ್ಮಾಂತರುದ್ಭಾಸಿನಿ ॥
ದೇವೋಽಯಂ ನಿಜಲಿಂಗಸಂಗಮ ಜುಷಾಮಂಗೇಷು ರಾರಾಜತಾಂ ।
ಚಿದ್ವ್ಯೋಮಾಪ್ರತಿಮಂ ನಿರಂತಮನಘಂ ಯಸ್ಮಿನ್ ಸ್ಫುರತ್ಯುಲ್ಲವಃ ॥

ಹುಬ್ಬಳ್ಳಿ
ಶಕೆ ೧೮೪೭ ಮಾಘ ಶುಕ್ಲ ೮
ಗುರುವಾರ.

— ಸಿದ್ಧರಾಮಪ್ಪ



CC-0. Jangamwadi Math Collection. Digitized by eGangotri

॥ ಶ್ರೀ ॥

# ಶ್ರೀಮದಲ್ಲಮವ್ಯೋಮ

## ೧ ನಿರಂಜನ ಜಂಗಮ ಪ್ರಕರಣ.



ಆದಿಯ ಸಂಗದಿಂದಾದವನಲ್ಲ। ಸಂಗಸುಖದೊಳಗಿದ್ದವನಲ್ಲ। ಇಬ್ಬರ ಸಂಗದಿಂದಾದವನಲ್ಲ। ರವಿಸಸಿಯ ಬೆಳಗಿನಿಂದ ಬೆಳೆದವನಲ್ಲ। ನಾದ ಬಿಂದು ಕಳೆಹುಟ್ಟದಮುನ್ನ ಅಲ್ಲಿಂದತ್ತ ಗುಹೇಶ್ವರಯ್ಯ.

ಅಜಾತ ಆದೇರಹ ಸಂಗತೋವಾ । ನೈವಾಥವಾಯುಗ್ಮ ಯುಜೋ ವಿಜಾತಃ॥ ರವೀಂದು ತೇಜೋಭಿರರೂಢಕಾಯಃ । ನೈವೇಂದ್ರಿಯಾಸಂಗಸುಖೋಪಲಬ್ಧಃ ॥ ಗುಹೇಶ್ವರೋಭಕ್ತಸುರಾವನೀಜಃ । ಮಾಂಪಾತ್ವಸಾ ಬಿಂದುಕಲಾದಿ ಪೂರ್ವಃ॥

ಅಲತಿ ಯದ್ಭಬಜಕಾಘಕುಲಂ ಮಲಂ। ಅಲತಿಮಾಯಿಕ ಮೋಹ ವಿಮಾರ್ಜನೇ । ಅಲತಿ ಯೋಗಿಕುಲಂ ರಮತೇಶಿವೇ। ಲ್ಲಮಇತಿ ಪ್ರಥಿತೋಭುವಿ ಸೋಲ್ಲಮಃ॥

ಕಾಯವದಲ್ಲ ವಿಂದ್ರಿಯಗಳಲ್ಲಸುವರ್ಗವದಲ್ಲ ಮಾನಸಂ । ಹೇಯ ಗುಣಂಗಳಲ್ಲ ವಿಯದಾದಿಯದಲ್ಲವು ಮಾಯೆಯಲ್ಲಮೇಣ್ । ಆಯತಕಾಲಮಲ್ಲ ಶಿವಶಕ್ತಿ ಸದಾಶಿವನಲ್ಲ ವಿದ್ಯವ॥ ಲ್ಲಾಯಮಿಚಿದ್ಘನೈಕ ಪರಜಂಗಮನಲ್ಲಮನೀಗೆಸೌಖ್ಯಮಂ ॥

ಸಮುದ್ರದಲ್ಲಡಗಿದ ಅಮೃತದಂತೆ ಮೊಸರಲ್ಲಡಗಿದ ನವನೀತದಂತೆ ವೇದಾಗಮ ಪುರಾಣಗಳಲ್ಲಿ ಗರ್ಭಿತವಾದ ಸನಾತನ ವೀರಶೈವ ಧರ್ಮವನ್ನು ಬೇರ್ಪಡಿಸಿ ಮುಮುಕ್ಷುಜನಕ್ಕೆ ಸೇವ್ಯವಾಗುವಂತೆ ಪರಿಶೋಧಿಸಿದ ಅನಾದಿ ವೃಷಭೇಶನ ಅವತಾರವೇಯಾದ ಶ್ರೀಬಸವೇಶನ ಪಶ್ಚಿಮ ಹೃದಯ ಕಮಲದ ಚಿತ್ಪ್ರಕಾಶ ಮೂರ್ತಿಯೆ ಅಲ್ಲಮನು. ಆಪ್ರಭುವಿನ ಚರಿತ್ರದ ಒಂದಂಶವನ್ನು ಬರೆಯಲು ಈ ಉಪಕ್ರಮವು.

CC-0. Jangamwadi Math Collection. Digitized by eGangotri

ಯಾತೇರುದ್ರ ಶಿವಾತನೂಃ ಶಿವಾ ವಿಶ್ವಾಹಭೇಷಜೀ। ಶಿವಾರುದ್ರಸ್ಯ ಭೇಷಜೀತಯಾನೋ ಮೃಡಜೀವಸೇ ॥ ಶ್ರೀರುದ್ರ. ॥ ಎಂಬ ಮಂತ್ರವು. ಎಲೈ ರುದ್ರನೆ ನಿನ್ನದಾವುದಾಸೊಂದು ಮಂಗಲಪ್ರದವಾದ ಶರೀರವು ಎಲ್ಲದಿನಗಳಲ್ಲಿ ನಿನ್ನ ತಾದಾತ್ಮ್ಯವನ್ನು ಹೊಂದಲಿಕ್ಕೆ ಔಷಧ ವಾಗಿರುವದೊ ಅ ನಿನ್ನಶರೀರದಿಂದ ನಮ್ಮನ್ನು ಬಾಳಲಿಕ್ಕಾಗಿ ಸುಖಗೊಳಿಸು. ಎಂಬ ಮೊದಲಾದ ಮಂತ್ರಗಳಿಂದ ಕಂಠೋಕ್ತಿಯಿಂದಲೂ, "ಅಗ್ನಿಮೀಳೇ ಪುರೋಹಿತಂ" ಮೊದಲಾದ ಋಕ್ಕುಗಳಿಂದ ಸೂಕ್ಷ್ಮದೃಷ್ಟಿ ಮಾತ್ರ ವೇದ್ಯವಾಗಿಯೂ ಸರ್ವವೇದವು ಇಷ್ಟ ಪ್ರಾಣಭಾವಲಿಂಗಗಳ ಧಾರಣಧ್ಯಾನ ಯೋಗ ಪರವಾಗಿರುವದು.

ಆದರು ವೇದಗಳಲ್ಲಿ ಕರ್ಮ ಮಿಶ್ರವಾಗಿಯೆ ವೀರಶೈವವು ಉಪಲಭಿಸುತ್ತದೆ. ಧರ್ಮದ ಸ್ಥೂಲ ಸೂಕ್ಷ್ಮ ತತ್ವಗಳನ್ನೆಲ್ಲ ಒಳಕೊಂಡ ವೇದಕ್ಕೆ ಇದು ಸಹಜವಾಗಿದೆ. ವೇದಗಳು ಬಾಹ್ಯಗೃಷ್ಟಿಗೆ ಯಜ್ಞಯಾಗಾದಿ ಧರ್ಮಪರವಾಗಿವೆ ಭಾಸವಾಗುತ್ತವೆ*. ಹಾಗು ಬ್ರಾಹ್ಮಣ ಆರಣ್ಯಕಾದಿಗ್ರಂಥಗಳಲ್ಲಿ ಯಾಜ್ಞಿಕ ಧರ್ಮದ ಉಲ್ಲೇಖವೆಕಂಡುಬರುತ್ತದೆ. "ತತ್ತ್ವಮಸಿ" ಮೊದಲಾದ ಮಹಾವಾಕ್ಯಗಳನ್ನು ಒಳಕೊಂಡ ಉಪನಿಷತ್ತುಗಳಲ್ಲಿ ಪೂರ್ವಭಾಗವು ಯಜ್ಞ ಅಥವಾ ಅದಕ್ಕೆ ಸಂಬಂಧಿಸಿದ ಒಂದು ವಿಷಯವನ್ನು ಹಿಡಿದೆ ಉಪಕ್ರಮವಾಗುತ್ತದೆ. ಉದಾಹರಣಕ್ಕಾಗಿ ಬೃಹದಾರಣ್ಯಕೋಪನಿಷತ್ತನ್ನು ತಕ್ಕೊಳ್ಳುವ. ಅದರ ಪ್ರಾರಂಭವು ಅಶ್ವಮೇಧದಲ್ಲಿ ಹವಿಸ್ಸಾಗತಕ್ಕ ಅಶ್ವ

---

* ೧ ಪೂರ್ವಮೀಮಾಂಸಾ ಕರ್ತೃವಾದ ಜೈಮಿನಿಯು ವೈದಿಕ ಧರ್ಮವು ಕೇವಲ ಯಜ್ಞಾದಿಪರವೆನ್ನುವನು.

೨ ಉಷಾವಾ ಅಶ್ವಸ್ಯ ಮೇಧ್ಯಸ್ಯಶಿರಃ। ಸೂರ್ಯಶ್ಚಕ್ಷುರ್ವಾತಃ ಪ್ರಾಣೋವ್ಯಾತ್ತಮಗ್ನಿರ್ವೈ ಶ್ವಾನರಃ ಸಂವತ್ಸರ ಆತ್ಮಾಶ್ವಸ್ಯಮೇಧ್ಯಸ್ಯ ಬೃಹದಾರಣ್ಯಕ. ಅಧ್ಯಾಯ ೧ ಬ್ರಾಹ್ಮಣ ೧

ಮೇಧ್ಯವಾದ ಅಶ್ವದ ಶಿರಸ್ಸು ಉಷಃಕಾಲವು ಅದರ ನೇತ್ರವು ಸೂರ್ಯನು. ಅದರ ಪ್ರಾಣವು ವಾಯುವು. ತೆರದಬಾಯಿಯು ಅಗ್ನಿಯು ಸಂವತ್ಸರವು ಆತ್ಮವು.

ಓಮಿತ್ಯೇತದಕ್ಷರಮುದ್ಗೀಥಮುಪಾಸೀತ। ಓಮಿತಿಹ್ಯುದ್ಗಾಯತಿ ಸ್ಯೋಽಪಾಖ್ಯಾನಂ। ಛಾಂದೋಗ್ಯ ಅಧ್ಯಾಯ ೧ಖಂಡ ೧.

ಓಮೆಂಬೀಅಕ್ಷರವು ಉದ್ಗೀಥಾವಯವವು. ಅದನ್ನುಪಾಸಿಸಬೇಕು ಓಮೆಂದುಉದ್ಗಾನಮಾಡುವನು. ಅದರ ವಿವೇಚನವು.

CC-0. Jangamwadi Math Collection. Digitized by eGangotri

ಸಂಸ್ಕಾರಕಳ್ಳಿಗ ಅವರಲ್ಲಿ ಭಾವಿಸತಕ್ಕ ಧರ್ಮಗಳಿಂದಲೆ ಆಗುತ್ತದೆ. ಛಾಂದೋಗ್ಯ ಉಪನಿಷತ್ತು ಉದ್ಗೀಥೋಪಾಸನದಿಂದಲೆ ಪ್ರಾರಂಭಿಸುವದು.

ಮನ್ವಾದಿ ಸ್ಮೃತಿಗಳಲ್ಲಾದರು ವೀರಶೈವಧರ್ಮವು ಒಳ್ಳೆ ವ್ಯಕ್ತವಾಗಿ ಕಂಡುಬರುವುದಿಲ್ಲ. ಗೌತಮ ಸ್ಮೃತಿಯಲ್ಲಿ "ಮುಖೇಮಂತ್ರೋ ಹೃದಿಧ್ಯಾನಂ ಮಸ್ತಕೇಲಿಂಗಧಾರಣಂ। ರುದ್ರಾಕ್ಷಂಚ ಶಿಖಾ ಭಸ್ಮ ಇತಿಬ್ರಾಹ್ಮಣಲಕ್ಷಣಮ್ ॥ :—ಮುಖದಲ್ಲಿ ಷಡಕ್ಷರ ಮಂತ್ರವೂ, ಹೃದಯದಲ್ಲಿ ಶಿವಧ್ಯಾನವೂ, ಮಸ್ತಕದಲ್ಲಿ ಲಿಂಗಧಾರಣವೂ, ರುದ್ರಾಕ್ಷವೂ ಶಿಖೆಯೂ ಭಸ್ಮವೂಇಂತಿದು ಬ್ರಾಹ್ಮಣ ಲಕ್ಷಣವು, ಎಂದೂ, ಮನುಸ್ಮೃತಿಯಲ್ಲಿ ಸರ್ವಕರ್ಮವಿಮುಕ್ತಸ್ಯ ಧ್ಯಾನಯೋಗರತಸ್ಯಚ। ನ ತಸ್ಯ ದಹನಂ ಕಾರ್ಯಂ ನ ಚ ಪಿಂಡೋದಕಕ್ರಿಯಾ ॥ ಶಿವಧ್ಯಾನರತೋಭೂತ್ವಾ ಶಿವಲಿಂಗಾಂಗ ಸಂಯುತಃ। ಶಿವೇತರಪರಿತ್ಯಾಗೀ ಧ್ಯಾನಯೋಗಿ ಸಉಚ್ಯತೇ ॥ ಸರ್ವಕರ್ಮಗಳಿಂದ ವಿಮುಕ್ತನಾದ, ಧ್ಯಾನಯೋಗದಲ್ಲಿ ರತಿಯುಳ್ಳ ಮೃತನ ದಹನವು ಮಾಡಬೇಕಾಗುದುದಲ್ಲ ಆವನಿಗೆ ಪಿಂಡೋದಕ್ರಿಯೆಯು ಇಲ್ಲ, ಅಂಗದಲ್ಲಿ ಶಿವಲಿಂಗದಿಂದ ಯುಕ್ತನಾಗಿ ಶಿವಧ್ಯಾನದಲ್ಲಿ ಪ್ರೀತಿಯುಳ್ಳ ಶಿವನಿಂದನ್ಯವೆಲ್ಲವನ್ನು ಬಿಟ್ಟವನು ಧ್ಯಾನಯೋಗಿಎಂದೆನಿಸುವನು, ಎಂಬಿವೆ ಮೊದಲಾದ ಅನೇಕ ಪ್ರಮಾಣಗಳಿರುವುದರಿಂದ ಸ್ಮೃತಿಗಳಲ್ಲಿ ವೀರಶೈವಧರ್ಮವು ಕಂಡುಬರುತ್ತದೆಂನಬಹುದು. ಆದರೆ ಸ್ಮೃತಿಗಳಲ್ಲಿ ಶುದ್ಧವೀರಶೈವವು ಉಪಲಭಿಸುವುದಿಲ್ಲ ಈ ವಿಷಯದಲ್ಲಿ ಲಿಂಗಧಾರಣಚಂದ್ರಿಕಾಕಾರನಉಕ್ತಿಯು ಮನನೀಯವಾಗಿದೆ. ಆ ಗ್ರಂಥಕಾರನು ಗೌತಮ ಸ್ಮೃತಿಯಿಂದ "ಮುಖೇ ಮಂತ್ರೋ" ಮುಂತಾಗಿರುವ ಶ್ಲೋಕವನ್ನು ಲಿಂಗಧಾರಣವು ಸ್ಮೃತಿಸಂಮತವೆಂದುದಾಹರಿಸಿ ಸಿದ್ಧಪಡಿಸಿರುವನು ಈ ಸಿದ್ಧಾಂತಗತ ಪೂರ್ವಪಕ್ಷವೂ ಸಮಾಧಾನವೂ ವಿಚಾರಣೀಯವಾಗಿವೆ. "ನನ್ವತ್ರ ಬ್ರಾಹ್ಮಣಮಾತ್ರೋದ್ದೇಶೇನ ಶಿವಮಂತ್ರ ಧ್ಯಾನ ಲಿಂಗಧಾರಣಾದಿ ಷಡ್ವಿಧ ಧರ್ಮವತ್ತ್ವಂ ವಿಧೀಯತೇ. ತಚ್ಚಾಚಾರ ವಿರುದ್ಧಂ. ಕೇಷುಚಿಲ್ಲಿಂಗಧಾರಣ ಭಸ್ಮಧಾರಣೋಭಯಾಭಾವಾತ್ ಕೇಷುಚಿಲ್ಲಿಂಗಧಾರಣಾಭಾವಾದಿತಿಚೇನ್ನ. ಮೃತಾಹಃ ಸಮತಿಕ್ರಮ್ಯ ಚಂಡಾಲಃ ಕೋಟಿಜನ್ಮಸು ಇತಿಬ್ರಾಹ್ಮಣ ಮಾತ್ರೋದ್ದೇಶೇನ ಮೃತಿದಿನ ಶ್ರಾದ್ಧಾತಿಕ್ರಮೇದೋಷವಿಧಾಯಕ ವಾಕ್ಯಸ್ಯೈಕಾದಶ್ಯಾದಿಯತಿಪ್ರಧಾನಕಾನಂದ ತೀರ್ಥೀಯ ಮತಾನುಯಾಯಿವ್ಯತಿರಿಕ್ತ ವಿಷಯತ್ವವತ್; ರಾತ್ರಿಃ ಶಿವಾ ಕಾಚನ ಸನ್ನಿಧತ್ತೇ ವಿಲೋಚನೇ ಜಾಗ್ರತಮಪ್ರಮತ್ತೇಸಮಾನ ಧರ್ಮಾಯುವಯೋಃ ಸಕಾಶೇಸಖಾಭವಿಷ್ಯತ್ಯಚಿರೇಣ ಕಶ್ಚಿತ್ ಇತಿಸಕಲ ಜನಲೋಚನೋದ್ದೇಶೇನ ಜಾಗರಣ

CC-0. Jangamwadi Math Collection. Digitized by eGangotri

ವಿಧಾಯಕ ವಾಕ್ಯಸ್ಯ ರಾಮಾನುಜ ಮತಾನುಯಾಯಿ ವ್ಯತಿರಿಕ್ತ ವಿಷಯತ್ವವಚ್ಛಾಸ್ಯಾಪಿಲಿಂಗಧಾರಿವಿಪ್ರವಿಷಯತ್ವಾತ್ ಕಿಂಚ ಮಸ್ತಕೇ ಲಿಂಗಧಾರಣಮಿತಿ ವಿಶೇಷ ಪರ್ಯವಸಾಯಿಪದಸತ್ತ್ವೇನ ಸಾಮಾನ್ಯ ರಸ್ಯಾಪಿ ಬ್ರಾಹ್ಮಣಪದಸ್ಯ ಲಿಂಗಾಂಗಿ ಬ್ರಾಹ್ಮಣರೂಪ ವಿಶೇಷ ಪರ್ಯವಸಾನಾಚ್ಚ" ಲಿಂಗಧಾರಣವು ಸ್ಮೃತಿಸಮ್ಮತವೆಂದು ನೀನುದಾಹರಿಸಿದ ಸ್ಮೃತಿಯಲ್ಲಿ ಮಂತ್ರಧ್ಯಾನ ಲಿಂಗಧಾರಣ ಮೊದಲಾದುದು ಸರ್ವಬ್ರಾಹ್ಮಣರನ್ನು ಕುರಿತು ವಿಧಿಸಲ್ಪಟ್ಟಿದೆ. ಇದು ನಡೆವಳಿಯಲ್ಲಿಲ್ಲ ಕೆಲವು ಬ್ರಾಹ್ಮಣರಲ್ಲಿ ಲಿಂಗಧಾರಣ ಭಸ್ಮಧಾರಣಗಳೆರಡೂ ಇಲ್ಲ, ಇನ್ನು ಕೆಲವರಲ್ಲಿ ಲಿಂಗಧಾರಣವಿಲ್ಲ. ಅಂದಬಳಿಕ ಆಚಾರದಲ್ಲಿಲ್ಲದುದನ್ನು ವಿಧಿಸುತ್ತಿರುವ ಈ ಸ್ಮೃತಿಯು ಹೇಗೆ ಪ್ರಮಾಣವಾಗಬಹುದು ? ಎಂದು ಪೂರ್ವಪಕ್ಷಿಯು ವಾದಿಸುವನು. ಇದಕ್ಕೆ ಗ್ರಂಥಕರ್ತನು:—ಸತ್ತದಿನ ಶ್ರಾದ್ಧಮಾಡದೆ ಇದ್ದರೆ ಕೋಟಿಜನ್ಮದಲ್ಲಿಚಂಡಾಲನಾಗುವರುಎಂಬ ವಿಧಿಯು ಸರ್ವಬ್ರಾಹ್ಮಣರನ್ನು ಕುರಿತು ತೋರುವುದಷ್ಟೆ? ಆದರೆ ಆನಂದತೀರ್ಥಮತಾನುಯಾಯಿ ಬ್ರಾಹ್ಮಣರು (ಮಾಧ್ವ ಬ್ರಾಹ್ಮಣರು) ಏಕಾದಶೀ ಮುಂತಾದ ವ್ರತಗಳನ್ನು ಪ್ರಧಾನವಾಗಿಟ್ಟುಕೊಂಡಿರುವರು, ಅವರು ಅಂತಹ ದಿನವು ಮೃತಿದಿನವಾದರು ಅಂದು ಶ್ರಾದ್ಧವನ್ನು ಮಾಡುವುದಿಲ್ಲ. ಅದರಿಂದ ಸತ್ತದಿನವನ್ನು ಮೀರಬಾರದೆಂಬ ಶ್ರಾದ್ಧವಿಧಿಯು ಆನಂದತೀರ್ಥ ಮತದ ಬ್ರಾಹ್ಮಣರನ್ನು ಕುರಿತು ಅಲ್ಲವೆನ್ನಬೇಕು ಹಾಗು. ಎಲೆಎರಡು ಕಣ್ಣುಗಳೆ ಒಂದಾನೊಂದು ಮಂಗಲವಾದ ರಾತ್ರಿಯು ಒದಗಿದೆ ತಪ್ಪದೆ ಎಚ್ಚರವಿರಿ. ಅಂದರೆ ನಿಮ್ಮಸಮೀಪದಲ್ಲಿ ನಿಂಮಂತಹನೊಬ್ಬನು ಗೆಳೆಯನು ಅಲ್ಪಕಾಲದಲ್ಲಿಯೇ ತೋರುವನು ಎಂಬುಕ್ತಿಯು ಎಲ್ಲಜನರಕಣ್ಣುಗಳು ಶಿವರಾತ್ರಿಯಲ್ಲಿ ಎಚ್ಚರಿರಬೇಕೆಂದು ವಿಧಿಸಿದರೂ ರಾಮಾನುಜ ಮತಾನುಯಾಯಿ ವಿಪ್ರರು ಶಿವಪೂಜಕರಲ್ಲದರಿಂದ ಅವರನ್ನು ವಿಷಯೀಕರಿಸುವುದಿಲ್ಲ. ಅದರಂತೆಯೆ ಈ ಗೌತಮ ಸ್ಮೃತಿಯಲ್ಲಿಯ ಬ್ರಾಹ್ಮಣಲಕ್ಷಣವು ಲಿಂಗಧಾರಿ ವಿಪ್ರರ ಮಟ್ಟಿಗೆಯೆ ಅದೆಅಲ್ಲದೆ ಬೇರೆಬ್ರಾಹ್ಮಣರನ್ನು ಕುರಿತು ಇರುವುದಿಲ್ಲ. ಮತ್ತೇನೆಂದರೆ ಇತಿಬ್ರಾಹ್ಮಣಲಕ್ಷಣಮ್ ಎಂದು ಎಲ್ಲ ಬ್ರಾಹ್ಮಣರನ್ನು ವಿಷಯೀಕರಿಸುವ ಬ್ರಾಹ್ಮಣಪದವಿದ್ದರು "ಮಸ್ತಕೇಲಿಂಗಧಾರಣಂ" ಎಂಬ ವಿಶೇಷಣದಿಂದ ಸಾಮಾನ್ಯವಾಚಕವಾದ ಬ್ರಾಹ್ಮಣಶಬ್ದವು ಲಿಂಗಧಾರಿಬ್ರಾಹ್ಮಣರೆಂಬ ವಿಶೇಷದಲ್ಲಿ ಸಮಾಪ್ತಿಯನ್ನೈದುತ್ತದೆ.

ಇಲ್ಲಿನಡೆದ ಶಂಕಾಸಮಾಧಾನಗಳೆರಡರಲ್ಲೂ ಪೂರ್ವಪಕ್ಷಿ ಸಿದ್ಧಾಂತಿಗಳೀಮೀರ್ವರುಮತದಿಂದ ಲಿಂಗಧಾರಣವು ಬ್ರಾಹ್ಮಣರಿಗೆ ಚಕ್ರಾದಿಧಾರ

CC-0. Jangamwadi Math Collection. Digitized by eGangotri

ಣದಂತೆ ಒಂದು *ಗುಣಧರ್ಮವಾಗಿದೆ. ಶಂಖಚಕ್ರಾದಿಗಳು ಬ್ರಾಹ್ಮಣನಿಗೆ ಅವಶ್ಯವಾಗಿ ಧಾರ್ಯವಲ್ಲ, ಅವುಗಳಿಂದಲ್ಲದೆ ಅವನ ಬ್ರಾಹ್ಮಣ್ಯವು ಸಿದ್ಧ ವಾಗುವುದಿಲ್ಲೆಂತಲ್ಲ ಆದರೆ ಬ್ರಾಹ್ಮಣನಾಗಿದ್ದು ಶಂಖಚಕ್ರಾದಿಲಾಂಛಿತನು ವೈಷ್ಣವಬ್ರಾಹ್ಮಣನಾಗುವನು. ಅದರಂತೆಯೆ ಬ್ರಾಹ್ಮಣನಾಗಿ ಲಿಂಗ ಭ ಸ್ಮಾದಿಧಾರಕನು ಲಿಂಗಿಬ್ರಾಹ್ಮಣನಾಗುವನು ಬ್ರಾಹ್ಮಣತ್ವಕ್ಕೆ (ಸ್ಮೃತಿಸಿ ದ್ಧವರ್ಣಬ್ರಾಹ್ಮಣತ್ವಕ್ಕೆ ಬ್ರಹ್ಮಆಚರತಿ ತಿ ಬ್ರಾಹ್ಮಣಃ ಎಂಬ ಸ್ವಭಾವ ಬ್ರಾಹ್ಮಣತ್ವಕಲ್ಲ) ಯಜ್ಞೋಪವೀತ ಅಥವಾ ಜನ್ನಿವಾರದ ಧಾರಣವು ಆವ ಶ್ಯಕವು. ಆದುದರಿಂದ ಗೌತಮಸ್ಮೃತ್ಯಾದಿಗಳಲ್ಲಿ ಹೇಳಿದ ಲಿಂಗಧಾರಣವು ವರ್ಣ ಧರ್ಮದಲ್ಲಿ ಮಿಶ್ರವಾದ ಗುಣಧರ್ಮವು.

ಮಹಾಭಾರತದ ಆನುಶಾಸನಿಕ ಪರ್ವದಲ್ಲಿ ೬೦ ನೇ ಅಧ್ಯಾಯದ ಪ್ರಥಮಃಶ್ಲೋಕದಲ್ಲಿ ಯುಧಿಷ್ಠಿರನು " ಕಿಮಾಹುರ್ಭರತಶ್ರೇಷ್ಠ ಪಾತ್ರಂ ವಿಪ್ರಾಃ ಸನಾತನಂ । ಬ್ರಾಹ್ಮಣಂ ಲಿಂಗಿನಂಚೈವ ಬ್ರಾಹ್ಮಣಂ ವಾಪ್ಯಲಿಂ ಗಿನಂ ॥ ಎಂದು ಭೀಷ್ಮನನ್ನು ಕುರಿತು ಭರತೋತ್ತಮನೆ ಲಿಂಗಿಬ್ರಾ ಹ್ಮಣನು ದಾನಪಾತ್ರವೊ ಅಲಿಂಗಿಬ್ರಾಹ್ಮಣನು ದಾನಪಾತ್ರವೊ? ಈ ವಿ ಷಯದಲ್ಲಿ ವಿಪ್ರರು ಆವನು ಸನಾತನದಾನಪಾತ್ರವೆನ್ನುವರು ಎಂದುಕೇ ಳಿದುದಕ್ಕೆ ಭೀಷ್ಮನು "ಸ್ವವೃತ್ತಿಮಭಿಪನ್ನಾಯ ಲಿಂಗಿನೇ ಚೇತರಾಯಚ । ದೇ ಯಮಾಹುರ್ಮಹಾರಾಜಉಭಾವೇತೌ ತಪಸ್ವಿನೌರಾ.":—ಮಹಾರಾಜನೆ ತನ್ನವೃತ್ತಿಯಲ್ಲಿ ನಿರತನಾದ ಲಿಂಗಿಗಾಗಲಿ ಅಲಿಂಗಿಗಾಗಲಿ ದಾನವನ್ನು ಕೊಡಬಹುದೆನ್ನುವರು ಇಬ್ಬರು ತಪಸ್ವಿಗಳೇ. ಎಂದುಹೇಳಿರುವನು. ಅನು ಶಾಸನಪರ್ವದ ಪೂರ್ವಾಪರಾಧ್ಯಾಯಗಳನ್ನು ಪರಿಶೀಲಿಸಿದರೆ ಈಶ್ಲೋಕ ಗಳಲ್ಲಿ ಶಿವಲಿಂಗಧಾರಣವು ಅಭಿಪ್ರೇತವಾಗಿದೆಂದು ನನಗೆ ಕಂಡುಬರುವು ದಿಲ್ಲ " ಲಿಂಗಿನೋಬ್ರಹ್ಮಚಾರಿಣಃ " ಎಂಬಕೋಶಕ್ಕನುಸರಿಸಿ ಬ್ರಹ್ಮಚಾರಿ ಎಂಬುದೆ ಲಿಂಗಿಶಬ್ದಾರ್ಥವಾಗಿದೆ. ಆದರು ಅನೇಕವೀರಶೈವಗ್ರಂಥಗಳಲ್ಲಿ ಈಶ್ಲೋಕಗಳು ಶಿವಲಿಂಗಧಾರಣವನ್ನು ಕುರಿತು ಇವೆ ಎಂದು ಉದಾಹರಿಸಲ್ಪ ಡುವುದರಿಂದ ಆ ಅರ್ಥವನ್ನೆ ಮಾನ್ಯಮಾಡಿ ಅವುಗಳನ್ನು ಪರೀಕ್ಷಿಸುವ

---

* ಗುಣಧರ್ಮ—ಒಂದಾನೊಂದು ಸಂಸ್ಕಾರವನ್ನು ಹೊಂದಿದರಿಂದ ಆಸಂಸ್ಕಾರಬಲದಿಂದ ಪ್ರಾಪ್ತವಾದ ಧರ್ಮವು. ಈಸಂಸ್ಕಾರವು ವರ್ಣಧ ರ್ಮದಲ್ಲಿ ಸಮಾವೇಶವಾದುದಲ್ಲ. ಆದರೆ ಆ ವರ್ಣಧರ್ಮಗಳನ್ನು ಪಾಲಿಸಿ ಹೆಚ್ಚಿಗೆ ಮಾಡತಕ್ಕದೊಂದು ಧರ್ಮವು. ವರ್ಣಧರ್ಮದಂತೆ ಮುಖ್ಯವಲ್ಲ.

CC-0. Jangamwadi Math Collection. Digitized by eGangotri

ಯುಧಿಷ್ಠಿರನ ಪ್ರಶ್ನಕ್ಕೆ ಉತ್ತರವಾದ ಭೀಷ್ಮವಾಕ್ಯದಲ್ಲಿ ಲಿಂಗವಿದ್ದವನೂ ಇಲ್ಲದವನೂ ಇಬ್ಬರು ತಪಸ್ವಿಗಳೆ ಎಂದುಹೇಳಿರುವುದರಿಂದ ಲಿಂಗಧಾರಣವು ಗುಣಧರ್ಮವಲ್ಲದೆ ಪ್ರಧಾನಧರ್ಮವಲ್ಲ.

ಇನ್ನು ಶ್ರೀಶಿವಾಗಮಗಳನ್ನು ನೋಡುವ ಇವಾದರು ಬಾಹುಲ್ಯದಿಂದ ಸ್ಥಾವರಲಿಂಗಪೂಜೆಯನ್ನು ಕುರಿತು ಇರುವವು. ಕಾಮಿಕಾದ್ಯಾಗಮಗಳಲ್ಲಿ ಕರ್ಷಣಾದಿಪ್ರತಿಷ್ಠಾಂತವಾದ ಕ್ರಿಯಾಕಲಾಪವು ಕಂಡುಬರುತ್ತಿದೆ. ಶ್ರೀಯಾಸಾಳದ ೨೬ ನೆಯ ಉಪದೇಶದಲ್ಲಿ, ಆಗಮಗಳ ಪ್ರಮಾಣತ್ವವು ಸ್ಥಾಪಿಸಲ್ಪಟ್ಟಿದೆ. ಆಸಂದರ್ಭದಲ್ಲ ಆಗಮಗಳು ಅವೈದಿಕಗಳು ಎಂಬ ಪೂರ್ವಪಕ್ಷದ ನಿರಾಕರಣವನ್ನು ಶ್ರೀನೀಲಕಂಠಾಚಾರ್ಯನು—"ಅತ್ರೇದಂ ತತ್ತ್ವಮಾಖ್ಯಾಹಿ ತಂತ್ರಾಣಾಂ ಯಾವತಾಂಕಿಮು । ಅವೈದಿಕತ್ವಂ ತಚ್ಚಾಪಿ ವೈದಿಕಾನರ್ಹತಾಥವಾ । ವೇದೇನಿಷಿದ್ಧತಾವೇದಮಂತ್ರಸಂಘಾಪ್ರಕಾಶ್ಯತಾ ॥ ನಾದ್ಯಃ ಪಕ್ಷಃ ಸ್ವಾಗಮೋಕ್ತಾದೇವತಾಗಾರನಿರ್ಮಿತಿಃ । ಪ್ರತಿಷ್ಠಾದೇವತಾಯಾಶ್ಚ ಯಾಗಾದ್ಯಾಕರ್ಮಸಂಹತಿಃ ॥ ಅಪ್ರಮಾಣಂ ಯದಿಭವೇದ್ವೇದೋಕ್ತಂಗತಮೇವತೇ । ಬಹೂನಾಂ ವೈದಿಕಾರ್ಥಾನಾಂ ತಂತ್ರೋಕ್ತತ್ವಾನ್ಮಹಾಕ್ಷತಿಃ ॥ ಅನರ್ಹತಾ ವೈದಿಕಾನಾಂ ಯದಿವೇದನಿಷಿದ್ಧತಾ । ರಾಜಸೂಯಾದಿಯಾಗಾನಾಮಧಿಕಾರಿ ವಿಶೇಷಣಾತ್ । ಬ್ರಾಹ್ಮಣಾನಾಂ ತೇಷುಕರ್ಮಸ್ವಧಿಕಾರನಿಷೇಧತಃ । ತಂತ್ರೋಕ್ತತಾಸ್ಯಾತ್ತೇಷಾಮಪ್ಯೇವಮೇವ ರಥಂತರಮ್ । ಬ್ರಹ್ಮವರ್ಚಸಕಾಮಸ್ತು ಪ್ರಸ್ತಂಕುರ್ಯಾದಿತಿಶ್ರುತೇಃ । ಬ್ರಹ್ಮತ್ರಾ ಯಾಜಯೆದ್ವೈಶ್ಯಂ ರಾಜ್ಞೋಗೌರೀವಿಜೀನಚ । ಇತ್ಯಾದಿಷುವಿಶೇಷೇಣ ತತ್ತತ್ಪ್ರಸ್ಟಾರ್ಹತಾನಹಿ । ಅತೋಽಸ್ಯ ವೇದವಿಧಿತೋನಿ ಷೇಧಾತ್ತಂತ್ರಚೋದಿತಂ । ಭವೇದೇತತ್ಸಮಸ್ತಂಚ ತತೋನಾನರ್ಹತಾಹಿತತ್ ॥ ವೇದಮಂತ್ರಾಪ್ರಕಾಶ್ಯತ್ವಂ ಕರ್ಮಣಾಂ ಯದಿತಾಂತ್ರಿಕಂ ॥ ಪ್ರತ್ಯಕ್ಷಶ್ರುತಿವಾಕ್ಯೇನ ಕರ್ಮಣಾಮಪ್ರಕಾಶ್ಯತಾ । ಪರೋಕ್ಷೇಣೋಕ್ತ ವೇದೇನನಾದ್ಯಃ ಪಕ್ಷಂ ಸಮಾಹಿತಃ । ಬಹೂನಾಂಶ್ರುತ್ಯಚೋದ್ಯಾನಾಂ ಕರ್ಮಣಾಂ ಸ್ಮೃತಿದರ್ಶನಾತ್ । ಪರೋಕ್ಷ ಶ್ರುತಿಚೋದ್ಯತ್ವಂ ಕಲ್ಪ್ಯತೇ ಮಹದುಕ್ತಿತಃ ॥ ಸಮಸ್ತಮಂತ್ರಸಘಾಂಶ್ಚ ಯಸ್ಯನಿಶ್ವಸಿತಂ ಮಂತಾಃ । ತಸ್ಯೈವಸಾಂಬಮೂರ್ತೇಸ್ತು ತಾಲ್ವೋಷ್ಠಪುಟಯತ್ನತಃ । ನಿರ್ಗತಾನಾಮಾಗ ಮಾನಾಂಪರೋಕ್ಷಶ್ರುತ್ಯಪೇಕ್ಷಯಾ । ಪ್ರಾಮಾಣ್ಯಂ ಸಿಧ್ಯತಿ ತತಸ್ತವೈವಸ್ಯಾನ್ಮಹಾಕ್ಷತಿಃ ॥ ಎಲ ಆಗಿಮಗಳು ಅವೈದಿಕವೆನ್ನುವಿಯಲ್ಲ ಸರ್ವಆಗಮಗಳು ಅವೈದಿಕವೆಂದು ನಿನ್ನ ಮತವೆ? ಹಾಗಾದರು ಅವೈದಿಕ ವೆಂದರೇನು? ವೈದಿಕಂಗೆ ಅರ್ಹವಲ್ಲದದು ಅವೈದಿಕವೊ? ವೇದ

CC-0. Jangamwadi Math Collection. Digitized by eGangotri

ದಿಂದ ನಿಷೇಧಿಸಲ್ಪಟ್ಟದು ಅವೈದಿಕವೋ, ವೇದಮಂತ್ರಗಳಿಂದ ಆಗಮೋಕ್ತ ವಿಧಾನಗಳು ಪ್ರಕಾಶಿತವಾಗಿಲ್ಲವೆಂಬುದು ಅವೈದಿಕವೋ? ಈ ಮೂರರ ಲ್ಲಿ ಮೊದಲನೆಯ ಪಕ್ಷವು ಸಿದ್ಧವಾಗದು. ಹೇಗಂದರೆ ತಂತ್ರದಲ್ಲಿ ಅಥ ವಾ ಆಗಮದಲ್ಲಿ ಹೇಳಿದುದೆಲ್ಲ ವೈದಿಕರಿಗೆ ಯೋಗ್ಯವಲ್ಲೆಂದು ನಿನ್ನ ಮತ ವಿದ್ದರೆ ಆಗಮಗಳಲ್ಲಿ ದೇವಾಲಯ ನಿರ್ಮಾಣ. ದೇವತಾಪ್ರತಿಷ್ಠಾನ ದೇ ತಾಯಾಗಾದಿ ವಿಷಯಗಳು ಉಕ್ತವಾಗಿವೆ. ಅವೆಲ್ಲ ವೈದಿಕರಿಗೆ ಅನರ್ಹ ವಾಗಿರುವದರಿಂದ ವೇದದಲ್ಲಿ ಅದೇ ವಿಷಯಕ್ಕೆ ಹೇಳಿದುದೆಲ್ಲಹೋಯ್ತು ಅನೇಕ ವೈದಿಕ ವಿಷಯಗಳನ್ನು ಆಗಮಗಳು ಪ್ರತಿವಾದಿಸುವುದರಿಂದ ನಿ ನ್ನೀಪಕ್ಷವು ಮಹಾನರ್ಥಕ್ಕೆಮೂಲವು. ಇನ್ನು ವೇದದಿಂದ ನಿಷೇಧಿಸಲ್ಪ ಟ್ಟವೆಲ್ಲ ಅವೈದಿಕವೆಂನರೆ ರಾಜಸೂಯಾದಿ ಯಾಗಗಳಿಗೆ ಕ್ಷತ್ರಿಯಾದಿಗಳು ಅಧಿಕಾರಿಗಳೆಂದು ಬ್ರಾಹ್ಮಣಾದಿಗಳಿಗೆ ಅವು ನಿಷೇಧಿಸಲ್ಪಟ್ಟವೆ ಅವೆಲ್ಲವು ತಾಂತ್ರಿಕ ವೆನಬೇಕಯ್ತು ಆದುದರಿಂದ ವೇದದಿಂದ ನಿಷೇಧವಾದುದೆಲ್ಲ ವೈದಿಕಾನರ್ಹವೆನಲಾಗದು. ವೇದಮಂತ್ರಗಳಿಂದ ಪ್ರಕಾಶಿಸಲ್ಪಡದಿರು ವುದೆಲ್ಲ ಅವೈದಿಕವೆಂದರೆ. ಆಗಮೋಕ್ತಕರ್ಮಗಳು ಪ್ರತ್ಯಕ್ಷವಾಗಿ ಉಪಲ ಭಿಸುವ ವೈದಿಕಮಂತ್ರಗಳಿಂದ ಪ್ರಕಾಶಪಾಗದಿರುವುದು ಅವೈದಿಕತ್ವವೂ ಕಿಂವಾ ಪರೋಕ್ಷ (ಈಗನಮಗೆ ದೊರಕದಿದ್ದರು ಹಿಂದಿನ ಮಹರ್ಷಿಗಳಿಗೆ ದೊರಕಿದ) ಶ್ರುತಿಯಿಂದಾದರು ಪ್ರಕಾಶವಾಗದಿರುವುದು ಅವೈದಿಕತ್ವವೋ? ಸ್ಮೃತಿಗಳಲ್ಲಿ ಹೇಳಿದ ಅನೇಕ ಕರ್ಮಗಳವಿಷಯಕ್ಕೆ ಶ್ರುತಿಯುಕಂಡುಬ ರುವುದಿಲ್ಲವಾದರು "ವಿರೋಧೇತ್ವನಪೇಕ್ಷ್ಯಂ ಸ್ಯಾತ್ ಅಸತಿಹಿ ಅನುಮಾನಂ" ವೆಂಬ ಪೂರ್ವಮೀಮಾಂಸಾ ಸೂತ್ರದಿಂದ ದೊಡ್ಡವರಾದ ಮಹರ್ಷಿಗಳು ಈ ಕರ್ಮಗಳನ್ನು ತಂಮ್ಮ ಸ್ಮೃತಿಗಳಲ್ಲಿ ಹೇಳಿರುವುದರಿಂದ ಆಕರ್ಮಗಳ ವಿಷಯದ ಶ್ರುತಿಗಳನ್ನು ಅವರು ಕಂಡಿದ್ದರೆಂದು ಕಲ್ಪಿಸುತ್ತದೆ. ಅಂದಬಳಿ ಕ ಸಕಲವೇದರಾಶಿಯು ಆವನೊಬ್ಬ ಪರಮೇಶನ ಶ್ವಾಸಮಾತ್ರವಾಗಿದೆ ಯೋ ಅಂತಹ ಸಾಂಬಮೂರ್ತಿಯ ತಾಲ್ವೋಷ್ಠ (ಅಂಗಳ ತುಟಿ) ಪ್ರ ಯತ್ನದಿಂದ ಹುಟ್ಟಿದ ಆಗಮಗಳು ಪರೋಕ್ಷದಿಂದ ಕಲ್ಪಿಸಿದ ಶ್ರುತಿಗಳಿ ಗಿಂತ ಎಷ್ಟು ಪ್ರಮಾಣ ಭೂತವಾದುವೆಂಬುದನ್ನು ನೀನೇನೋಡು. ಇದ ರಿಂದ ನಿನ್ನ ಪಕ್ಷಕ್ಕೆ ಮಹಾ ಹಾನಿಯು.

ಈ ವಿಚಾರಸರಣಿಯು ಲಕ್ಷಣೀಯವಾಗಿದೆ. ಆಗಮಗಳ ವೈದಿಕ ಪ್ರಮಾಣತ್ವವು ಅವು ಹೇಳುವ ದೇವತಾಲಯನಿರ್ಮಾಣ ಮುಂತಾದುದನ್ನು ವೈದಿಕರು ಅಂಗೀಕರಿಸಬೇಕಾದುದರಿಂದಲು ಶ್ರುತಿಸಂಘವನ್ನು ಶ್ವಾಸಮಾತ್ರ ದಿಂದುಸುರಿದ ಪರಮಾತ್ಮನು ಆಗಮಗಳನ್ನು ಹೇಳಿರುವುದರಿಂದಲು; ವೇದದ

CC-0. Jangamwadi Math Collection. Digitized by eGangotri

ಲ್ಲಿ ಈಗ ಕಂಡುಬಾರದ ಕರ್ಮ ವಿಷಯದಲ್ಲಿ ಸ್ಮೃತಿಗಳಿರುವುದರಿಂದ ವೈದಿಕಕರು ಕಲ್ಪಿಸಬೇಕಾದ ಅಪ್ರತ್ಯಕ್ಷ ಅಥವಾ ಪರೋಕ್ಷ ಶ್ರುತಿಗಿಂತ ಅವು ಬಲವಾದುದರಿಂದಲಲು ಸ್ಥಾಪಿಸಲ್ಪಡುತ್ತದೆ. ಆಗಮದಲ್ಲಿ ಹೇಳಿದ ದೇವತಾಲಯಾದಿ ನಿರ್ಮಾಣವು ಸ್ಥಾವರಲಿಂಗವಿಷಯವಾಗಿಯೂ|ತಾಂಡವೇಶ್ವರ ವೀರಭದ್ರ ವೃಷಭಾದಿ ಮೂರ್ತಿಗಳ ವಿಷಯವಾಗಿಯೂ, ಶಕ್ತಿಮೂರ್ತಿಗಳ ವಿಷಯವಾಗಿಯೂ ಇರುತ್ತವೆ. ಕಾರಣಾಗಮ ಸುಪ್ರಭೇದಾಗಮ ಕಾಮಿಕಾಗಮಗಳು ಉಪಲಭಿಸುತ್ತವೆ ನೋಡು. ಅಂದಬಳಿಕ ಆಗಮಗಳ ಬಹುಲಭಾಗವು ಸ್ಥಾವರಲಿಂಗವಿಷಯವಾದುದು. ಲೋಕದಲ್ಲಿ ಬಳಕೆಯಲ್ಲಿದ್ದ ಸ್ಥಾವರಲಿಂಗಾದಿವಿಷಯುಕವಾದ ಆಗಮಗಳ ಪ್ರಾಮಾಣ್ಯಬುದ್ಧಿಯಿಂದ ಬಳಕೆಯಲ್ಲಿರದ ಇಷ್ಟಲಿಂಗಧಾರಣಾದಿವಿಷಯದಲ್ಲಿ ಪ್ರಾಮಾಣ್ಯಬುದ್ಧಿಯು ಹುಟ್ಟತಕ್ಕುದಾಗಿದೆ ಹಾಗು ಆಗಮದಲ್ಲುಕ್ತವಾದ ಶುದ್ಧ ವೀರಶೈವಾಚಾರವು ಉಪಲಬ್ಧವಾದ ವೇದಭಾಗದಲ್ಲಿ ಸ್ಪಷ್ಟವಿರದರಿಂದ ಪರೋಕ್ಷಶ್ರುತಿ ಕಲ್ಪನದಿಂದ ಸ್ಮೃತ್ಯುಕ್ತಧರ್ಮವು ಹೇಗೆಯೋ ಹಾಗೆ ಅಂಗೀಕರಿಸತಕ್ಕುದಾಗಿದೆ. ಅರ್ಥಾತ್ ವೀರಶೈವಧರ್ಮವು ಶುದ್ಧರೂಪದಿಂದ ಅಷ್ಟೊಂದು ವ್ಯವಹಾರದಲ್ಲಿರಲಿಲ್ಲ ಯುಗಯುಗಗಳಲ್ಲಿ ಹರಿಶ್ಚಂದ್ರಾದಿ ಚಕ್ರವರ್ತಿಗಳು ಈ ಧರ್ಮವನ್ನನುಸರಿಸಿದ್ದರೆ ಇದಿಷ್ಟು ಅರೂಢವಿರುತ್ತಿದ್ದಿಲ್ಲ.

ಶ್ರೀಕಂಠಾಚಾರ್ಯರು ಆಗಮ ಪ್ರಾಮಾಣ್ಯದಲ್ಲಿ ಆದರವುಳ್ಳವರು. "ವಯಂ ತುವೇದಶಿವಾಗಮಯೋರ್ಭೇದಂ ನಪಶ್ಯಾಮಃ" ನಾವಾದರೊ ವೇದ ಶಿವಾಗಮಗಳಲ್ಲಿ ಭೇದವನ್ನು ಕಾಣಲಾರೆವು—ಅವರು ಬ್ರಹ್ಮಸೂತ್ರ ಭಾಷ್ಯದಲ್ಲಿ ಶ್ರುತಿಯು ಲಿಂಗಧಾರಣವನ್ನು ವಿಧಿಸುತ್ತದೆಂದು ಹೇಳಿಲ್ಲ.

ಅಪ್ಪಯ್ಯ ದೀಕ್ಷಿತರು ಶಿವಪಾರಮ್ಯಮತಿಯುಳ್ಳವರು ಶಿವಾಗಮ ಪ್ರಾಮಾಣ್ಯವಾದಿಗಳು. "ತ್ವಮೇಕಃ ಸರ್ವೇಷಾಂಪುರಮಥನ ಸೇವ್ಯೋ ಜನಿಮತಾಂ । ಅಜಾನಂತಸ್ತ್ವೇತದ್ಬತ ವಿಫಲಯಂತ್ಯಾಯುರಧಮಾಃ ॥ ಮನುಷ್ಯಾ ದೇವಾನಾಮಿವತವಸದೇವಾಸುರನರಾಃ। ಶ್ರುತಾಹ್ಯೇತೇ ಜೀವಾಃ ಪಶುವದುಪಭೋಗ್ಯಾಃ ಪಶುಪತೇ ॥ ಶಿವತತ್ತ್ವವಿವೇಕ ॥ :—ಎಲೈ ಪುರಮಥನನೆ ಜನ್ಮವನ್ನುತಾಳಿದವರಿಗೆ ನೀನೊರ್ವನೆ ಸೇವ್ಯನಿರುವೆ ಇದನ್ನರಿಯದೆ ಅಧಮರು ತಂಮ ಬಾಳುವೆಯನ್ನು ವ್ಯರ್ಥವಾಗಿ ಹಾಳುಮಾಡುವರಲ್ಲ. ದೇವತೆಗಳಿಗೆ ಮನುಷ್ಯರುಹೇಗೊ ಹಾಗೆ ಈ ದೇವಾಸುರವರರು ಎಲೈ ಪಶುಪತಿಯೆ ನಿನಗೆ ಉಪಭೋಗ್ಯರಾಗಿಹರು.

CC-0. Jangamwadi Math Collection. Digitized by eGangotri

"ಏತೇನ ಶಿವಾಗಮಾನಾಮಪ್ರಾಮಾಣ್ಯ ಪ್ರಲಾಪೋಽಪಿ ಮೂರ್ಖಾಣಾಂ ಗಲಹಸ್ತಿತಃ ಪ್ರಮಾಣಮೂರ್ಧನ್ಯೇಷು ಶೈವಪುರಾಣೇಷುಬಹುಧಾ ತೇಷಾಂ ಬಹೂಕರಣಾತ್. ಕಂಠೋಕ್ತ್ಯಾ ಕೇಷುಚಿತ್ಪ್ರಾಮಾಣ್ಯವ್ಯವಸ್ಥಾಪನಾಚ್ಚ" ಇವರಿಂದ ಶಿವಾಗಮಗಳು ಅಪ್ರಮಾಣವೆಂದು ಮೂರ್ಖರಾಡುವ ನುಡಿಯು ದೂಡಲ್ಪಟ್ಟಿತು. ಪ್ರಮಾಣಮೂರ್ಧನ್ಯಗಳಾದ ಶಿವಪುರಾಣಗಳಲ್ಲಿ ಶಿವಾಗಮಗಳನ್ನು ಗೌರವಿಸಿರುವರು. ಮತ್ತು ಕೆಲವು ಶಿವಪುರಾಣಗಳಲ್ಲಿ ಸ್ಪಷ್ಟವಾಗಿ ಕಂಠದಿಂದಲೆ ಶಿವಾಗಮಗಳ ಪ್ರಮಾಣತ್ವವನ್ನು ಸ್ಥಿರಗೊಳಿಸಿರುವರು.

ಅಪ್ಪಯ್ಯದೀಕ್ಷಿತರ ಆವ ಗ್ರಂಥದಲ್ಲಿಯೂ ಲಿಂಗಧಾರಣವು ಕಂಡುಬರುವುದಿಲ್ಲ. ಆದುದರಿಂದ ಗುಣಧರ್ಮರೂಪವಾದ ಲಿಂಗಧಾರಣವು ಸಹ ಬಹುವಿರಳವಾಗಿತ್ತು. ಶುದ್ಧವೀರಶೈವವು ಅತಿ ಗೂಢವಾಗಿತ್ತೆನ್ನುವಲ್ಲಿ ಸಂಶಯವಿಲ್ಲ.

ಸೂಕ್ಷ್ಮಾಗಮ ಮಕುಟಾಗಮ ವಾತೂಲಾಗಮ ಮುಂತಾದ ಆಗಮಂಗಳಲ್ಲಿ ಶುದ್ಧ ವೀರಶೈವ ಪ್ರತಿಪಾದಕ ಪ್ರಮಾಣಗಳಿರುವವಾದರು ಇತರ ಗ್ರಂಥಬಾಹುಲ್ಯದಲ್ಲಿ ಅಡಗಿಹೋಗಿವೆ. ಅಂದರೆ ಆ ಆಗಮಂಗಳಲ್ಲಿ ಬಹುಲವಾದ ಭಾಗದಲ್ಲಿ ಇತರ ಶೈವವಿಷಯಗಳೂ ಇಷ್ಟಲಿಂಗಾತಿರಿಕ್ತವಾದ ಸ್ವಯಂಭ್ವಾದಿಲಿಂಗ ವಿಷಯಗಳೂ ವಿಪುಲವಾಗಿ ನಿರ್ದೇಶಿಸಲ್ಪಟ್ಟು ಉತ್ತಮಾಧಿಕಾರಿಗಳಿಗಾಗಿ ವೀರಶೈವವು ಅತ್ಯಲ್ಪವಾಗಿಯೆ ಉದಾಹರಿಸಲ್ಪಟ್ಟದೆ. ಇದಕ್ಕೆ ಸುಪ್ರಭೇದವನ್ನು ನೋಡು.

ಕಾರಣಂ ವಾತುಲಂ ಚೈವ ಸೂಕ್ಷ್ಮಂ ಚ ಸುಪ್ರಭೇದಕಂ । ಆಗಮೋಯಂ ಚತುರ್ಭೇದಃ ಸ್ವಯಂಭೂಲಿಂಗಪೂಜನೇ ॥

ಕಾಮಿಕಂ ವಿಜಯಂಚೈವ ಸ್ವಾಯಂಭುವಮಥಾನಲಂ । ಪೂಜಯೇದ್ದೈವಲಿಂಗಂಚ ಕಲ್ಪಯೇತ್ಕಲ್ಪವಿತ್ತಮಃ ॥

ಚಿಂತ್ಯಂಚೈವ ಸಹಸ್ರಂಚ ದೀಪ್ತ್ಯಂ ಚಾಪ್ಯಯುತಂ ತಥಾ । ದಿವ್ಯಲಿಂಗಾರ್ಚನೇ ಪ್ರೋಕ್ತಂ ಸರ್ವಕರ್ಮ ಸಮಾಚರೇತ್ ॥

ಯೋಗಜಂ ಮಕುಟಂಚೈವ ನಿಶ್ವಾಸಂ ರೌರವಂ ತಥಾ । ಆರ್ಷಕಸ್ಯಾರ್ಚನೇ ಪ್ರೋಕ್ತಮಾಗಮಾರ್ಥವಿಶಾರದೈಃ ॥

ವೀರಂಚ ವಿಮಲೋದ್ಭೇದಂ ಚಂದ್ರಜ್ಞಾನಂಚ ಬಿಂಬಕಂ । ಮಾನುಷೇಷು ಹಿ ಲಿಂಗೇಷು ಭವಂತ್ಯೇತೇ ಗಜಾನನ ॥

CC-0. Jangamwadi Math Collection. Digitized by eGangotri

ಪ್ರೋದ್ಗೀತಂ ಲಲಿತಂ ಚೈವ ಸಿದ್ಧಂ ಸಂತಾನಮೇವಚ | ರಾಕ್ಷಸಸ್ಯಾಸುರಸ್ಯಾಪಿ ಲಿಂಗಸ್ಯಾರ್ಚಾವಿಧೌ ಸ್ಮೃತಮ್ ॥

ಪಾರಮೇಶ್ವರಶರ್ವೋಕ್ತಂ ಅಂಶುಮಾನ್ ಕಿರಣಂತಥಾ। ಬಾಣಲಿಂಗಾರ್ಚನೇ ಪ್ರೋಕ್ತಂ ಗಾಣಪೇಚಾಗಪೂಜಿಮೇ॥ ಸು. ೧೮೪

ಈಸ್ವಯಂಭ್ವಾದಿ ಲಿಂಗಗಳ ಲಕ್ಷಣವು ಸುಪ್ರಭೇದದಲ್ಲಿಯೆ ವಿವರಿಸಲ್ಪಟ್ಟದೆ.

"ಲಿಂಗಂ ತು ದ್ವಿವಿಧಂ ಪ್ರೋಕ್ತಮಚಲಂ ಚ ಚಲಂ ತಥಾ। ಪ್ರತ್ಯೇಕಂ ದ್ವಿವಿಧಂ ಪ್ರೋಕ್ತಂ ವ್ಯಕ್ತಾವ್ಯಕ್ತೋಭಯಾತ್ಮಕಂ॥ ಪ್ರಾಸಾದೇ ಸ್ಥಾಪಿತಂ ಲಿಂಗಮಚಲಂ ತಚ್ಛಿಲಾದಿಜಂ। ಸ್ಥಾಪಿತಂ ತಚ್ಚಲಂ ಗೇಹೇ ಸ್ಥಿತಂ ಲಿಂಗಮಥೋಚ್ಯತೇ॥ ಪಂಚಧಾತತ್ಸ್ಥಿರಂ ಲಿಂಗಂ ಸ್ವಯಂಭೂ ದೈವ ಗಾಣಪಂ। ಆರ್ಷಂಚ ಮಾನುಷಂ ಲಿಂಗಂ ತೇಷಾಂ ಲಕ್ಷಣಮುಚ್ಯತೇ। ನಾನಾಚ್ಛಿದ್ರಸುಸಂಯುಕ್ತಂ ॥ ಅದೃಷ್ಟಮೂಲಂ ತಲ್ಲಿಂಗಂ ಕರ್ಕಶಂ ಭುವಿದೃಶ್ಯತೇ ॥ ಯಲ್ಲಿಂಗಂ ಸ್ವಯಮುದ್ಭೂತಂ ಪೀಠಲಕ್ಷಣವಿಚ್ಯುತಮ್ ॥ ಇತ್ಯಾದಿ॥ ಶಿವಾಗಮಂಗಳು ಈ ತೆರನಾಗಿ ಶೈವವಿಷಯಗಳನ್ನೇ ಬೋಧಿಸುತ್ತಿದ್ದುದರಿಂದಲೆ "ಸೂಕ್ಷ್ಮಂಚ ಪದ್ಮಸಂಖ್ಯಾತು" ಕಾರಣಾಗಮತಂತ್ರಾವತಾರಪಟಲ:—"ಸೂಕ್ಷ್ಮಂ ಸೂಕ್ಷ್ಮಸ್ಯಸಂಪ್ರೋಕ್ತಂ ತದ್ಗ್ರಂಥಃ ಪದ್ಮಸಂಖ್ಯಯಾ" ಸುಪ್ರಭೇದತಂತ್ರಾವತಾರವಿಧಿಪಟಲ॥ 'ಸೂಕ್ಷ್ಮಂ ಸೂಕ್ಷ್ಮಸ್ಯ ಸಂಪ್ರೋಕ್ತಂ। ತದ್ಗ್ರಂಥಃ ಪದ್ಮಸಂಖ್ಯಯಾ"॥ ಕಾಮಿಕಾಗಮ॥ ಎಂಬೀ ಪ್ರಮಾಣಗಳಿಂದ ಪದ್ಮಸಂಖ್ಯಗ್ರಂಥಗಳುಳ್ಳ ಸೂಕ್ಷ್ಮಾಗಮದಲ್ಲಿ ವೀರಶೈವವಿಷಯವು ೮೦೫ ಶ್ಲೋಕಗಳಿಂದ ವಿವೃತವಾಗಿದೆ. ಅಂದರೆ

$\frac{೪೧}{೨೦೦೦೦೦೦೦೦೦೦೦೦}$ ಅಂಶದಲ್ಲಿ ಮಾತ್ರ ವೀರಶೈವವಿಷಯವು ಬಂದಿದೆ.

"ಪಾರಮೇಶ್ವರ ತಂತ್ರಂತುದ್ವಾದಶಂ ಲಕ್ಷಮುಚ್ಯತೆ"॥ ಕಾರಣಾ ಗಮ. "ಶ್ರೀದೇವ್ಯಾಸ್ತು ಸಮಾಖ್ಯಾತಂ ಪಾರಮೇಶ್ವರ ಮುತ್ತಮಂ । ಗ್ರಂಥ ದ್ವಾದಶಲಕ್ಷಂತು" ಸುಪ್ರಭೇದ ‖ "ಶ್ರೀದೇವ್ಯಾಸ್ತು ಪಾರಮೇಶ್ವರ ಮುತ್ತಮಂ।ಗ್ರಂಥದ್ವಾದಶಲಕ್ಷಂತು॥ ಕಾಮಿಕಾಗಮ। ಎಂಬೀಪ್ರಮಾಣಂಗಳಿಂದ ಪಾರಮೇಶ್ವರವು ಹನ್ನೆರಡುಲಕ್ಷ ಸಂಖ್ಯೆಯುಳ್ಳದಾಗಿದೆ. ಅದರಲ್ಲಿ ೨೨೧೮ ಶ್ಲೋಕಗಳಿಂದ ಇತರ ವಿಷಯವನ್ನೊಳಕೊಂಡು ವೀರಶೈವವು ಗದಿತವಾಗಿದೆ. ಇದರಲ್ಲಿ ವೀರಶೈವವು ಸೂಕ್ಷ್ಮಾಗಮದಂತೆ ಸ್ಪಷ್ಟವಾಗಿಯೂ ಶುದ್ಧವಾಗಿಯೂ ಹೇಳಲ್ಪಟ್ಟಿಲ್ಲ.–ನೋಡು–ವೀರಶೈವವಿಷಯವನ್ನು ಹೇಳಿದ ಭಾಗದಲ್ಲಿ ೧೪ನೆಯ ಪಟಲದಲ್ಲಿ ಲಿಂಗ ಪೂಜಾವಿಧದಲ್ಲಿ "ಮಧ್ಯಾಂತರೇ ಭವೇ

CC-0. Jangamwadi Math Collection. Digitized by eGangotri

ಚ್ಛಂಕಾ ಪಾಣಿಲಿಂಗಸ್ಯ ಲಿಂಗಿನಃ । ಪೂಜಾಯಾಂ ದೇಹಧರ್ಮಸ್ಯ ಶಿಷ್ಯ ಪಾಣಿತಲೇ ಕ್ಷಿಪೇತ್ ॥ ಶಿಷ್ಯಾದ್ಯಭಾವೇ ದೇವೇಶಿ ಸಜ್ಜಿಕಾಯಾಂ ಪುನಃ ಕ್ಷಿಪೇತ್ । ನಿರ್ವರ್ತಯಿತ್ವಾ ನಿರ್ವರ್ತ್ಯಂ ಸಚ್ಛೈಲಂ ಸ್ನಾನಮಾಚರೇತ್ ಪುನಃ ಕುರ್ಯಾದ್ಯಥಾಪೂರ್ವಂಪೂಜಾಶೇಷಂ ಮಮಪ್ರಿಯೇ" ೫೨-೫೩ ೫೪- ಎಲೌ ದೇವಿಲಿಂಗಿಯು ಪೂಜೆಗಾಗಿ ಕರಸ್ಥಲದಲ್ಲಿ ಲಿಂಗದೇವ ನನ್ನು ಧರಿಸಿರುವಾಗ ಮಧ್ಯದಲ್ಲಿ ದೇಹಧರ್ಮದ ಸಂಶಯವು ಬಂದಲ್ಲಿ ಆ ಲಿಂಗವನ್ನು ಶಿಷ್ಯನ ಹಸ್ತದಲ್ಲಿರಿಸಬೇಕು ಶಿಷ್ಯರಾರು ಇಲ್ಲದಿದ್ದರೆ ಸಜ್ಜಿ ಕೆಯಿಲ್ಲಿಟ್ಟು ಮಾಡತಕ್ಕದನ್ನು ಮಾಡಿದ ಬಳಿಕ ಸಚ್ಛೈಲಸ್ನಾನವಂ ಮಾಡಿ ಮೊದಲಂತೆ (ಕುಳಿತು) ಪುನಃ ಉಳಿದ ಪೂಜೆಯನ್ನು ಮುಗಿಸಬೇಕು— ಹಾಗು ನಾಲ್ಕನೆಯ ಪಟಲದಲ್ಲಿ ದೀಕ್ಷಾಹೋಮ ಪ್ರಕರಣದಲ್ಲಿ—ಪ್ರತ್ಯೇಕಂ ಗುರುಣಾಹೋಮಃಕಾರ್ಯೋSಗ್ನಿಗಿರಿನಂದನೇ । ಅಥಹುತ್ವಾಷ್ಟದಿಕ್ಪಾ ಲಾನ್ ತಾರಾಹುಂಫಟ್ ಶಿರೋನ್ವಿತಂ॥೮೧-೮೬-ಇತ್ಯಾದಿಯಾಗಿ ಹೇಳಿದ ಅಷ್ಟದಿಕ್ಪಾಲರು ಮುಂತಾದವರಿಗೆ ಮಾಡಬೇಕೆಂದು ಹೇಳಿದ ಹೋಮಾಚ ರಣವನ್ನು ನೋಡು. ಈ ಪಾರಮೇಶ್ವರಾಗಮದಲ್ಲಿ ಆದಿಶೈವ ಶುದ್ಧಶೈ ವಾದಿ ವಿಷಯಗಳಾದರು ವಿಶೇಷವಾಗಿ ತುಂಬಿವೆ. ಏಳನೆಯ ಪಟಲ ವನ್ನು ನೋಡು.

ಪಾರಮೇಶ್ವರದ ಪಂಚಮಪಟಲದಲ್ಲಿ 'ಶಿವರಾತ್ರ್ಯಾಂ ಮಹಾದೇವಿ ಸ್ನಾಯಾದಸ್ತಮಯೇ ಹ್ರದೇ । ಸಂಸ್ಥಾಪ್ಯಪುರತೋದೇವಿ ಪೂಜಯೇಲ್ಲಿಂಗ ಮಾತ್ಮನಃ ೧-೭೪ ದೇವಿ ಶಿವರಾತ್ರಿಯಲ್ಲಿ ಸೂರ್ಯಾಸ್ತವಾಗುತ್ತಲೆ ಹೊಂ ಡದಲ್ಲಿ ಜಳಕವನ್ನು ಮಾಡಬೇಕು. ಮತ್ತು ತನ್ನ ಮುಂದೆ ಪೀಠದಲ್ಲಿ ತನ್ನ ಲಿಂಗವನ್ನಿಟ್ಟು ಪೂಜಿಸಬೇಕು. ಎಂಬಲ್ಲಿ "ಶಿವಲಿಂಗೈಕ ವೀರಸ್ಯಾತ್ಪುಣ್ಯ ಕ್ಷೇತ್ರಾದಿ ನಿಸ್ಪೃಹಃ" ಸೂಕ್ಷ್ಮಾಗಮ ೮-೭೧ ಎಂಬ ಶಿವಲಿಂಗ ವೀರತ್ವಕ್ಕೆ ಸಲ್ಲದ ಶಿವರಾತ್ರಿಯ ಕಾಲನಿಯಮವೂ " ಕರಸ್ಥಲಾಗತಂ ಲಿಂಗಂ ವಾಮತಃ ಕೃತಗೋಮುಖಂ । ಕನಿಷ್ಠಾನಾಮಿಕಾಗ್ರಾಭ್ಯಾಂ ಶಿವಲಿಂಗಂಚ ಗೋಮು ಖಂ। ಅಂಗುಷ್ಠಾಗ್ರೇಣ ಚೈವಂ ಹಿ ಸಂಸ್ಪೃಶೇದರ್ಚನಾವಿಧೌ"೧ ಸೂ. ೬. ಪ. ೫೨-೫೩-ಕರಸ್ಥಲಕ್ಕೆ ಬಂದ ಲಿಂಗವನ್ನು ಎಡಮಗ್ಗುಲಿಗೆ ಗೋಮುಖ ವಾಗುವಂತಿರಿಸಿ ಕಿರಿಬೆರಲ ಮತ್ತು ಅನಾಮಿಕೆಯ ತುದಿಯಿಂದ ಲಿಂಗವ ನ್ನೂ ಹೆಬ್ಬೆರಲ ತುದಿಯಿಂದ ಗೋಮುಖವನ್ನೂ ಮುಟ್ಟಬೇಕು. ಎಂದು ಸೂ ಕ್ಷ್ಮಾಗಮದಲ್ಲಿಯೂ "ಯನ್ನ್ಯೂನಮತಿರಿಕ್ತಂ ವಾ ಪೂಜಾಯಾಂ ಮಮ ಯೋಗಿನಃ। ಕರಪಂಕಜಪೂಜಾಯಾಂ ತತ್ಸರ್ವಂ ಸಾಂಗಮೇವ ಹಿ ॥ ಉದ್ಧೃತ್ಯ ಸಜ್ಜಿಕಾದ್ವಾರಾತ್ಮರಪಂಕಜಮಧ್ಯಗಂ । ಲಿಂಗಂಕೃತ್ವಾರ್ಚ ಯೇಲ್ಲಿಂಗೀ ದಕ್ಷಿಣೇನ ಚ ಪಾಣಿನಾ" ॥ ಪಾರಮೇಶ್ವರ ೧೩ ಪ. ೩೧-೩೨

CC-0. Jangamwadi Math Collection. Digitized by eGangotri

ನನ್ನ ಯೋಗಿಯು ಮಾಡುವ ನನ್ನ ಪೂಜೆಯಲ್ಲಿ ಆಗಬಹುದಾದ ನ್ಯೂನಾಧಿಕ್ಯಂಗಳು ದೋಷಗಳಾಗಿರದೆ, ಕರಪಂಕಜ ಪೂಜೆಯಲ್ಲಿ ಎಲ್ಲವು ಸಾಂಗವೆನಿಸುತ್ತದೆ. ಸಜ್ಜಿಕೆಯಿಂದ ಲಿಂಗವನ್ನೆತ್ತಿ ಆದನ್ನು ಕರಕಮಲಮಧ್ಯದಲ್ಲಿರಿಸಿ ಬಲಗಯ್ಯಿಂದ ಲಿಂಗಿಯು ಪೂಜಿಸತಕ್ಕದು॥ ಎಂಬು .ಪಾರಮೇಶ್ವರದಲ್ಲಿಯೂ ವೀರಶೈವನು ಕರಕಮಲಮಧ್ಯಡಲ್ಲಿ ಲಿಂಗವನ್ನರ್ಚಿಸ ಬೇಕೆಂದು ಹೇಳಿದ ವಿಧಿಗೆ ವಿರೋಧವಾದ ಬಾಹ್ಯ ಪೀಠವೂ ಗದಿತವಾಗಿದೆ.

ಇದು ಅಲ್ಲದೆ "ತಾದೃಶೇ ವಿಗತೇಲಿಂಗೇ ದೈವಾದ್ವಾ ಮಾನುಷಾದಪಿ॥ ಪ್ರಮಾದಾದ್ವಾ ವಿಪತ್ಯಾ್ವಾ ಪುನರನ್ಯಚ್ಚ ಧಾರಯೇತ್" । ೧ ಪಾರಮೇಶ್ವರ ೧೪-೧೩-ಅಂತಪ್ಪಲಿಂಗವು ದೈವದಿಂದಾಗಲಿ ಮನುಷ್ಯನ ಎಚ್ಚರಗೇಡಿತನದಿಂದಾಗಲಿ ವಿಪತ್ತಿಯಿಂದಾಗಲಿ ಹೋದಲ್ಲಿ ಮತ್ತೊಂದನು ಧರಿಸಬೇಕು ಎಂಬ ಪುನರ್ಲಿಂಗಧಾರಣವಿಧಿಯೂ, "ಯಲ್ಲಿಂಗಮಾದಿತೋ ಲಬ್ಧಂ ಯಾವಜ್ಜೀವಂ ತದೇವ ಹಿ। ನಾನ್ಯಲಿಂಗಂ ಭವೇನ್ಮರ್ಥ್ಯೇಯದಿ ಸ್ಯಾತ್ಸತು ಪಾತಕೀ ॥ ಯಲ್ಲಿಂಗಂ ಗುರುಣಾ ದತ್ತಂ ಪ್ರಾಣಲಿಂಗಂ ತದೇವಹಿ। ಮರ್ಥ್ಯೇನಷ್ಟೇ ಪ್ರಮಾದೇನ ದೇಹಂತ್ಯಕ್ತ್ವಾ ಶಿವಂ ವ್ರಜೇತ್ ೧॥ ೨ ಪಟಲ ೧೧೧-೧೧೨ ಗುರುವಿನಿಂದ ದೀಕ್ಷಾದತ್ತವಾದ ಲಿಂಗವು ಪ್ರಮಾದದಿಂದ ಕಳೆದು ಹೋದರೆ ದೇಹವನ್ನು ನೀಗಿ ಶಿವಸಾಯುಜ್ಯವನ್ನು ಹೊಂದಬೇಕೆಂಬ ಅನ್ಯಲಿಂಗಧಾರಣನಿಷೇಧವೂ ಈ ಆಗಮದಲ್ಲಿ ಕಂಡುಬರುತ್ತದೆ. ಆದುದರಿಂಬ ಇದರಲ್ಲಿ ಕೇವಲ ವೀರಶೈವ ವಿಷಯವು ಬಂದಿಲ್ಲ. ಹೀಗಿದ್ದರು ಪಾರಮೇಶ್ವರಾಗಮದ ಎಲ್ಲ ವೀರಶೈವ ವಿಷಯವನ್ನು ಗಣನೆಯಲ್ಲಿ ಹಿಡಿದರು ಸಹ $\frac{೨೨೦೦}{೧೨೦೦೦೦} = \frac{೧೧}{೬೦೦}$ ರಲ್ಲಿ ಮಾತ್ರ ವೀರಶೈವವಿಷಯವು ಕಥಿತವಾಗಿದೆ. ವೀರಶೈವವು ಸ್ಪಷ್ಟವಾಗಿ ಉಪಲಭಿಸದರಿಂದಲೆ ದಂಡಿ ಬಾಣ ಮೊದಲಾದವರ ಕಾದಂಬರಿಯಲ್ಲಿಯೂ ಕಾವ್ಯನಾಟಕಗಳಲ್ಲಿಯೂ ಸಹ ವೀರಶೈವರ ಹೆಸರು ಕಂಡುಬರುವುದಿಲ್ಲ.

ಈ ಉತ್ಕೃಷ್ಟವಾದ ಧರ್ಮವು ಕರ್ಮಕಾಂಡದಲ್ಲಿ ಬೆರೆತು ಬಿಟ್ಟಿತ್ತು. ಆರೊಬ್ಬನು ಪರಿಶುದ್ಧವಾದೀ ಧರ್ಮವನ್ನು ಆಚರಿಸುತ್ತಿದ್ದರೆ ಆತನು ಅಜ್ಞರಿಂದಲು ಪೂರ್ವೋತ್ತರ ಮೀಮಾಂಸಕರಿಂದಲು ಇವನ್ನುಳಿದವರಿಂದಲು ಅನ

CC-0. Jangamwadi Math Collection. Digitized by eGangotri

ಹ್ನನೆಂದೂಹಿಸಲ್ಪಡುತ್ತಿದ್ದನು.* ಕುಲಾಚಾರಮಿಶ್ರವಾಗಿ ಕೆಲವರು ಇದನ್ನು ಆಚರಿಸುತ್ತಿದ್ದರು. ಹೀಗೆ ಗೂಢವಾದ ಧರ್ಮವನ್ನು ಪ್ರಕಟಿಸಿದ ಅನಾದಿಭಕ್ತ ಬಸವೇಶ್ವರನ ವಿಷಯದಲ್ಲಿ ಶ್ರೀಮದಲ್ಲಮನಾಡಿದ ನುಡಿಗಳು ಅತಿ ಸಯುಕ್ತಿಕವಾಗಿವೆ: ಪೂರ್ವದಲ್ಲಿ ಈ ಧರ್ಮವು ಅಡಗಿದ ಪ್ರಾಕೃತಧರ್ಮದೊಡಗೂಟವನ್ನು ಮಾರ್ಮಿಕವಾಗಿ ತಿಳಿಸುತ್ತವೆ. "ಪ್ರಾಣಲಿಂಗದ ಪೂರ್ವಾಶ್ರಯವ ಕಳೆಯಲೆಂದು ಲಿಂಗಪ್ರಾಣಿಯಾದ; ಲಾಂಛನದ ಪೂರ್ವಾಶ್ರಯವ ಕಳೆಯಲೆಂದು ಜಂಗಮಪ್ರಾಣಿಯಾದ; ಪ್ರಸಾದದ ಪೂರ್ವಾಶ್ರಯವ ಕಳೆಯಲೆಂದು ಮಹಾಪ್ರಸಾದಿಯಾದ; ಈ ತ್ರಿವಿಧದ ಪೂರ್ವಾಶ್ರಯವ ಕಳೆಯಲೆಂದು ಮರ್ತ್ಯಕ್ಕೆ ಅವತರಿಸಿದನು ನಂಮ ಸಂಗನಬಸವಂಣನು."

ಪ್ರಾಣದ ಪ್ರಾಕೃತಾಚಾರವನ್ನು ಮಾಣಿಸಿ ಲಿಂಗದೇಹವನ್ನು ಮಾಡುವ ಕಾರ್ಯವೇ ತನ್ನದಾದ ಲಿಂಗವನ್ನು ಮೇಲೆ ವಿವರಿಸಿದ ರೀತಿಯಿಂದ ಪ್ರಾಕೃತಧರ್ಮವನ್ನು ಬಿಡದೆ ಮನುಮುನಿಗಳು ಧರಿಸಿ ಆ ಲಿಂಗವನ್ನು ತಂಮ ಜಾತಿರೂಪವಾದ ಪೂರ್ವಾಶ್ರಯಕ್ಕೆ ತಂದರು. ಹಾಗು ಆ ಲಿಂಗವೇ ತಂಮ ಪ್ರಾಣವೆಂದು ಬಗೆಯದೆ ಅದನ್ನು ಗೌಣವಾಗಿಟ್ಟರು. ಅದನ್ನು ನೀಗಿಸಿ ಪೂರ್ವಾಶ್ರಯವನ್ನು ಕಳೆದು ಲಿಂಗವನ್ನು ಆದರ ಸ್ವಾಭಾವಿಕ ಪ್ರಭಾವದಿಂದ ಮೆರೆಯಿಸಲಿಕ್ಕೂ; ಭಸ್ಮರುದ್ರಾಕ್ಷಗಳೆಂಬ ಲಾಂಛನಗಳನ್ನು ಧರಿಸಿ

---

* ಶಿವಪುರಾಣ ವಾಯವೀಯದಲ್ಲಿ:—

ಉಪಮನ್ಯು:—ಶ್ರೀಕಂಠೇನ ಶಿವೇನೋಕ್ತಃ ಶಿವಾಯೈ ಚ ಶಿವಾಗಮಃ
ಶಿವಾಶ್ರಿತಾನಾಂ ಕಾರುಣ್ಯಾಚ್ಛ್ರೇಯಸಾಮೇಕಸಾಧನಂ ॥

ನೀಲಕಂಠನಾದ ಪರಮಾತ್ಮನಿಂದ ಪಾರ್ವತಿಗೆ ಶಿವಾಗಮವು ಹೇಳಲ್ಪಟ್ಟಿತು. ಪರಮಾತ್ಮನಿದನ್ನು ತನ್ನನ್ನಾಶ್ರಯಿಸಿದ ಭಕ್ತರ ಕಾರುಣ್ಯದಿಂದ ಹೇಳಿರುವನು. ಅದು ಅವರ ಮುಕ್ತಿಗೆ ಒಂದೆ ಒಂದು ಸಾಧನವಾಗಿದೆ.

ಕೃಷ್ಣ:—ಭಗವನ್ ಶ್ರೋತು ಮಿಚ್ಛಾಮಿ ಶಿವೇನ ಪರಿಭಾಷಿತಂ ।
ವೇದಸಾರಂ ಶಿವಜ್ಞಾನಂ ಸ್ವಾಶ್ರಿತಾನಾಂ ವಿಮುಕ್ತಯೇ ॥
ಅಭಕ್ತಾನಾಮಬುದ್ಧಾನಾಮಯುಕ್ತಾನಾಮಗೋಚರಂ ।
ಅರ್ಥೈರ್ದಶಾರ್ಥೈಃ ಸಂಯುಕ್ತಂ ಗೂಢಮಪ್ರಾಜ್ಞನಿಂದಿತಂ ॥

ತನ್ನನಾಶ್ರಯಿಸಿದವರ ಮುಕ್ತಿಗಾಗಿ ಶಿವನಿಂದ ಹೇಳಲ್ಪಟ್ಟ ವೇದಸಾರವಾದ ಶಿವಜ್ಞಾನವನ್ನು ಕೇಳಲಿಕ್ಕೆ, ಪೂಜ್ಯನೆ! ಬಯಸುತ್ತೇನೆ. ಅದು ಶಿವಭಕ್ತಿಹೀನರಿಗೂ, ಬುದ್ಧಿಶೂನ್ಯರಿಗೂ, ಶಿವಯೋಗರಹಿತರಿಗೂ, ಗೋಚರಿಸದು—ಅದರಲ್ಲಿ ಪತಿ ಪಶು, ಪಾಶ ಮುಂತಾದ ಪದಾರ್ಥಗಳ ವಿವೇಚನವುಂಟು. ಗೂಢವಾದುದು, ಮಂದಮತಿಗಳಿಂದ ನಿಂದಿತವಾದುದು.

CC-0. Jangamwadi Math Collection. Digitized by eGangotri

ತಂಮ ಜಾತ್ಯಾದಿಗಳನ್ನು ಪರಿತ್ಯಜಿಸದೆ ಹಲವರು ಶಿವಭಕ್ತರಾಗಿ ಜಂಗಮರೆನಿಸಿಕೊಳ್ಳುವರು. ಆದುದರಿಂದ ಲಾಂಛನವು ತನ್ನ ಪೂರ್ವಾಶ್ರಯದದೆಸೆಯಿಂಧ ಮುಕ್ತವಾಗದೆ ಇತ್ತು. ಅದನ್ನು ಮಾಣಿಸಿ ಅಷ್ಟಾವರಣ ಪಂಚಾಚಾರಪರನು ಪ್ರಾಕೃತನಲ್ಲ ಶಿವಸ್ವರೂಪನೆಂದು ಪ್ರಕಟಿಸುವುದು ಅವಶ್ಯವಾದುದಿತ್ತು. ಅಭಕ್ತಿಯನ್ನು ನೆಲೆಗೊಳಿಸಿ ಹಾಗೆಮಾಡಲಿಕ್ಕೂ; ಗುರುಲಿಂಗಜಂಗಮಶೇಷವು ಪರಾನಂದಸ್ವರೂಪವು, ಅನ್ನವಲ್ಲ, ಆದುದರಿಂದ ಲಿಂಗಧಾರಿಯಾದ ಶಿವಭಕ್ತಿಪರನ ಪದಾರ್ಥಗಳೆ ಸ್ವೀಕಾರ್ಯವು ಎಂಬುದನ್ನು ಮರೆತು ಪ್ರಾಕೃತಧರ್ಮದಲ್ಲಿಯು ಜಾತಿಭೇದಗಳನ್ನು ಲಿಂಗವಂತರಲ್ಲಿ ಕಲ್ಪಿಸಿ ಪ್ರಸಾದದ ಪೂರ್ವಾಶ್ರಯವೆಂಬ ಅನ್ನರೂಪವನ್ನು ನೆನಿಸುತ್ತಿದ್ದರು. ಅದನ್ನಿಲ್ಲದಂತೆಮಾಡಿ ಗುರುಲಿಂಗಜಂಗಮಶೇಷವು ಮಹಾಪ್ರಸಾದವೆಂದು ತೋರಿಸಲಿಕ್ಕೂ ಸಂಗನಬಸವಂಣನು ಅವತರಿಸಿದನು.

ಆ ಸಂಗನಬಸವಂಣನ ಪಶ್ಚಿಮಹೃದಯಪ್ರಕಾಶವೆ ಪ್ರಭುವೆಂಬ ಜಂಗಮವಸ್ತು. ಶ್ರೀಬಸವೇಶ್ವರನ ಚರಣಗಳಲ್ಲಿ ಅಪಾರಭಕ್ತಿಯನ್ನು ವಹಿಸಿದ ಕೆಳದಿಯ ಭೂಪಾಲರಲ್ಲಿ ಅಖಿಲಕಲಾಪಾಂಡಿತ್ಯವಿಭ್ರಾಜಿತನಾದ ಬಸವೇಂದ್ರ ಭೂಮಿರಮಣನು ಸಕಲವೇದಾಗಮ ಪುರಾಣೋಪಪನಿಷತ್ತುಗಳ ತತ್ತ್ವಜ್ಞನಾಗಿದ್ದನು. "ಲೋಕಾನಾಂ ತು ಹಿತಾಯ ಸಾರಕೆಲದೀಸಿಂಹಾಸನಾಧೀಶ್ವರೋ। ಗೌರೀನಾಥಕೃಪಾರ್ಜಿತಾಖಿಲಕಲಾಪಾಂಡಿತ್ಯ ವಿಭ್ರಾಜಿತಃ ॥ ಕುರ್ವೇಹಂ ಬಸವೇಂದ್ರ ಭೂಮಿರಮಣೋ ರತ್ನಾಕರಾಖ್ಯಾಂಕೃತಿಂ। ಸರ್ವಂಪ್ರೇಕ್ಷ್ಯ ಚ ವಾಪ್ರಪಂಚ ಮುಪಕೃತ್ಸುತ್ರ ತ್ವಮಾಕರ್ಣಯ" ॥ ಅನೇಸಾರೆ ಸಕಲಶಾಸ್ತ್ರಗಳನ್ನು ನಿರೀಕ್ಷಿಸಿ ಅವುಗಳ ತಾತ್ಪರ್ಯವನ್ನರಿತು ಶಿವತತ್ವರತ್ನಾಕರವೆಂಬ ಉತ್ಕೃಷ್ಟವಾದ ಜ್ಞಾನಭಾಂಡಾಗಾರವನ್ನು ರಚಿಸಿರುವನು. ಈಗ್ರಂಥದ ಉತ್ಕರ್ಷವು ವಿಪುಲವಾದುದರಿಂದಲೆ ಪರಮತೀಯರಾದ ರಾವಬಹಾದುರ ಎಚ್. ಕೃಷ್ಣಶಾಸ್ತ್ರಿ B. A. ಎಮ್. ರಾಮಕೃಷ್ಣಕವಿಗಾರು M.A. ಬಿ. ರಾಮರಾವ ಅವರ್ಗಳ್ M.A. LLB. ಎಂಬೀಮಹಾಶಯರು ಅದನ್ನು ಪ್ರಕಟಿಸಹತ್ತಿರುವರು. ಶಿವತತ್ತ್ವ ರತ್ನಾಕರದಲ್ಲಿ ಬಸವಭೂಮಿರಮಣನು ಆಗಮಗಳ ಆಧಾರದಿಂದ ವೀರಶೈವಮತವನ್ನು ವಿವರಿಸಿರುವನು. ಮತ್ತು ಶ್ರೀಮದ್ಬಸವಾವತಾರವನ್ನೂ ವರ್ಣಿಸಿರುವನು. ಅದರಮೇಲಿಂದ ಅನಾದಿಭಕ್ತನೆಂಬ ಪರಬ್ರಹ್ಮವಸ್ತುವೆ ಬಸವೇಶ್ವರನೆಂತಲು ಆತನ ಪಶ್ಚಿಮ ಹೃದಯ ಪ್ರಕಾಶರೂಪ ಜಂಗಮತತ್ತ್ವವೆ ಶ್ರೀಮದಲ್ಲಮನೆಂತಲು ಸಿದ್ಧವಾಗುತ್ತದೆ. ನೋಡು "ಅನಾದಿಭಕ್ತರೂಪೇಣ ಭಗವಾನ್ಪರಮಃಶಿವಃ। ಪಂಚಾಚಾರಾಂಶ್ಚ ಷಡ್ರೂಪಾ

CC-0. Jangamwadi Math Collection. Digitized by eGangotri

ಣ್ಯಷ್ಟಾವಾವರಣಾನಿಚ । ಲಿಂಗಾಂಗಸಾಮರಸ್ಯಂಚ ಮುಕ್ತಿಮಾಹೆಜಗದ್ಗುರುಃ ॥ ಅದೇ ಬಸವಕ್ಷಿತೀಂದ್ರನಪ್ಪಣೆಯಿಂದ ಷಡಕ್ಷರಮಂತ್ರಿಯುರಚಿಸಿದ ವೀರಶೈವ ಧರ್ಮಶಿರೋಣಿಯಲ್ಲುದಾಹರಿಸಿದ ಯೋಗಜಾಗಮ ವಾಕ್ಯವು ॥ ಜಗದ್ಗುರುವಾದ ಪರಮಶಿವನು ಅನಾದಿಭಕ್ತರೂಪದಿಂದ ಪಂಚಾಚಾರಗಳನ್ನೂ (ಲಿಂಗಾಚಾರ ಶಿವಾಚಾರ ಗಣಾಚಾರ ಸದಾಚಾರ ನಿಯತಾಚಾರ) ಷಡ್ರೂಪಗಳನ್ನೂ (ಅಖಂಡತ್ವವೆಭಕ್ತ ನಿತ್ಯತ್ವವೆಲಿಂಗ ಪರ್ಣತ್ವವೆ ಗುರು ಚಿತ್ಪ್ರಕಾಶವೆ ಜಂಗಮ ಪರಾನಂದವೆ ಪ್ರಸಾದ ಚಿದ್ರಸವೆ ಪಾದೋದಕ ಎಂಬ ಆರು ರೂಪಗಳನ್ನೂ) ಅಷ್ಟಾವರಣಗಳನ್ನೂ (ಗುರುಲಿಂಗ ಜಂಗಮ ಪ್ರಸಾದ ಪಾದೋದಕ ಭಸ್ಮ ರುದ್ರಾಕ್ಷ ಮಂತ್ರ) ಲಿಂಗಾಂಗಸಾಮರಸ್ಯವನ್ನೂ ಬೋಧಿಸಿದನು. ಎಂಬೀಪ್ರಮಾಣದಿಂದ ಅನಾದಿಭಕ್ತನೆ ಈ ವೀರಶೈವ ಧರ್ಮಪ್ರವರ್ತಕನಾದ ಜಗದ್ಗುರುವು. ಆ ಪ್ರವರ್ತಕನು ಅನಾದಿಯಾದುದರಿಂದಲೆ ಧರ್ಮವು ಸನಾತನವು. ಆಜಗದ್ಗುರುವೆ ಬಸವೇಶ್ವರನೆಂಬುದಕ್ಕೆ ಅದೇ ಶಿವತತ್ತ್ವರತ್ನಾಕರದ ನಾಲ್ಕನೆಯ ಕಲ್ಲೋಲದ ೯ ನೆಯ ತರಂಗದಲ್ಲಿ ಶ್ರೀಬಸವೇಶ್ವರಾವತಾರನಿರೂಪಣದ ಪ್ರಸ್ತಾವದಲ್ಲಿ "ಶಿವಾಗಮಾನಾಂ ಚ ಪರಂ ರಹಸ್ಯಮಹಂ ಯಥಾವೇದ್ಮಿ ತಥೈವವೇತ್ತಿ ॥ ತಸ್ಮಾದಮುಷ್ಯಾಪಿ ಮಮಾಪಿ ದೇವಿ । ಭೇದಸ್ತುನಾಮ್ನಾನಮಹಾಮಹಿಮ್ನಾ ॥" ಎಲೌದೇವಿ ಶಿವಾಗಮಂಗಳ ಪರಮರಹಸ್ಯವನ್ನು ನಾನು ಹೇಗೊ ಹಾಗೆಯೆ ಈ ವೃಷಭನು ತಿಳಿದಿರುವನು. ಆದುದರಿಂದ ನನಗೂ ಇವನಿಗೂ ಹೆಸರಿನಿಂದಲೆ ಭೇದವಲ್ಲದೆ ಮಹಾಮಹಿಮೆಯಿಂದಲ್ಲ. ಇಂತೆಂದು ಬಸವಾವತಾರವನ್ನು ತಾಳುತ್ತಿರುವ ಶ್ರೀವೃಷಭನನ್ನು ಕೊಂಡಾಡಿದುದರಲ್ಲಿ ಆಗಮಂಗಳ ರಹಸ್ಯವನ್ನು ಪರಮಾತ್ಮನಂತೆಯೆ ಆತನು ತಿಳಿದಿರುವನೆಂದು ಹೇಳಿರುವುದೂ, ಬಸವಾವತಾರ ಕಾರ್ಯವು ಅನ್ಯವಿರೋಧಿಮತಗಳ ನಿವಾರಣಪೂರ್ವಕವಾಗಿ ವೀರಶೈವ ಮತಸ್ಥಾಪನವೆಂದು "ಆಜ್ಞಾಪಯಾಮಾಸ ತಮಂಬಿಕಾಯಾಃ । ಪತಿಸ್ತ್ವಯಾಶಾಸನಮಸ್ಮದೀಯಂ । ಪ್ರಕಾಶನೀಯಂ ಪ್ರಕಟಾಪದಾನ್ಯೈರ್ವಿಜಿತ್ಯ ಭೂಮೌ ವಿಮತಾನಶೇಷಾನ್" ನಂಮ್ಮಶಾಸನವು ನಿನ್ನಿಂದ ಪವಾಡಗಳಿಂದ ಭೂಮಿಯಲ್ಲಿ ವಿಮತಗಳನೆಲ್ಲಗೆದ್ದು ಪ್ರಕಾಶಿಸಲ್ಪಡತಕ್ಕದು—ಎಂದು ಅಂಬಿಕಾರಮಣನು ಆಜ್ಞಾಪಿಸಿರುವುದೂ ಪ್ರಮಾಣವಾಗಿದೆ. ಏಕೆಂದರೆ ವೀರಶೈವಧರ್ಮವು ಅನಾದಿ ಭಕ್ತನಿಂದಲೆ ಉಪದೇಶಿಸಲ್ಪಡತಕ್ಕದೆಂದು ಯೋಗಜಾಗಮವು ಹೇಳುತ್ತದೆ.

ಆದುದರಿಂದ ಧರ್ಮಬೋಧವೆಂಬ ಲಕ್ಷಣವು ಶ್ರೀಬಸವೇಶ್ವರಾವತಾರದಲ್ಲಿ ಅನ್ವಯಿಸುವುದರಿಂದ ಬಸವನೆ ಅನಾದಿಭಕ್ತನೆಂಬುದು ನಿರ್ವಿ

CC-0. Jangamwadi Math Collection. Digitized by eGangotri

ವಾದವು. ಅನಾದಿಭಕ್ತನ ಪಶ್ಚಿಮ ಹೃದಯದಲ್ಲಿ ನಿರಂಜನ ಜಂಗಮವೆಂ
ದು ಹೇಳಿಯದೆ. ಮೋಡು "ಭಕ್ತಸ್ಯ ಪಶ್ಚಿಮಹೃದಿಸ್ಥಿತೋಯೋ ನಾದಿಜಂ
ಗಮಃ । ತಸ್ಯಸ್ವರೂಪಮಧುನಾ ಸಮಾಸೇನ ಪ್ರಕಾಶ್ಯತೇ ॥ ಪಶ್ಚಾದನಾ
ದಿಭಕ್ತಸ್ಯ ಹೃಚ್ಚಿತ್ಪದ್ಮಾಂತರೇಸದಾ। ಚಿನ್ಮಂಡಲತ್ರಯೋಪೇತಃ ಪ್ರಣವಾ
ಸನಮಧ್ಯಗಃ । ನಿರಂಜನಸ್ತತ್ಪ್ರಣವಸ್ವರೋಪೋ ತ್ರ ನಿಗದ್ಯತೇ ॥ ನಿರಾ
ಕೃತಂ ರಂಜನಂಯನ್ಮಾಯಾಮೋಹವಿಜೃಂಭಿತಂ। ಏಕಸ್ವರೂಪಸಿದ್ಧೇನ
ಸಭವೇದ್ಧಿನಿರಂಜನಃ । ತದೇವನಿಷ್ಕಲಂ ಬ್ರಹ್ಮನಿರ್ವಿಕಲ್ಪಂ ನಿರಜಂನಂ
ನಿಃಸಂಜ್ಞಂ ನಿರವಗ್ರಹಂ ನಿರಶನಂ ನಿಷ್ಕಾರಣಂ ನಿಷ್ಫಲಂ। ನಿಸ್ಸಂಗಂ
ನಿರುಪಾಧಿಕಂ ನಿರುಪಮಂ ನಿಷ್ಕ್ರಿಯಂ ನಿಶ್ಚಲಂ। ನಿಷ್ಪುಣ್ಯಂ ನಿರವ
ಗ್ರಹಂ ನಿರಧಿಕಂ ನಿರ್ವಾಸನಂ ನಿರ್ವಹಂ। ನಿರ್ಭೇದ್ಯಂ ನಿರಘಂ ನಿರಂ
ಜನಪದಂ ಚೈತಂ ಭಜೆ ಜಂಗಮಂ ॥ ಆಪ್ಯಂತರಹಿತಂ ಜ್ಯೋತಿರನಾದಿ
ಪ್ರಭುರವ್ಯಯಂ। ಅನಾದೇಶೋಽಹ್ಯ ಯಾತಶ್ಚ ಜಂಗಮಃಸ್ಯಾನ್ನಿರಂಜನಃ॥

ಭಕ್ತನ ಪಶ್ಚಿಮಹೃದಯದಲ್ಲಿ ಆವುನಾನೊಂದು ಜಂಗಮ ತತ್ತ್ವವಿ
ಹುದೊ ಅದರ ಸ್ವರೂಪವೀಗ ಸಂಕ್ಷೇಪದಿಂದ ವಿವರಿಸಲ್ಪಡುತ್ತಿದೆ. ಅನಾ
ದಿಭಕ್ತನ ಪಶ್ಚಿಮಹೃದಯದ ಚಿತ್ಪದ್ಮಾಂತರದಲ್ಲಿ ಪ್ರಣವಾಸನದ ಮಧ್ಯ
ದಲ್ಲಿ ನಿರಂಜನ ತತ್ತ್ವವು. ಆದರಸ್ವರೂಪವದೀಗ ಹೇಳಲ್ಪಡುತ್ತಿದೆ. ಮಾ
ಯಾಮೋಹದಿಂದ ತೋರಿದ ರಂಜನವನ್ನು ನಿರಾಕರಣಮಾಡುವುದರಿಂದ
ಈ ತತ್ತ್ವವು ನಿರಂಜನವೆನಿಸುತ್ತದೆ. ಅದು ನಿತ್ಯಸಿದ್ಧವಾದ ಏಕರೂಪ
ದಿಂದಲೆ ಇಹುದು ವಿಕಾರಿಯಲ್ಲ. ಆದುವೆ ನಿಷ್ಕಲಬ್ರಹ್ಮವೆಂತಲು ನಿರ್ವಿ
ಕಲ್ಪವೆಂತಲೂ ನಿರಂಜನವೆಂದೂ ಅನ್ನಲ್ಪಡುವುದು. ಅದು ನಾಮಾದಿ
ಸಂಜ್ಞೆಗಳಿಲ್ಲದುದು. ಅದಕ್ಕೆ ಆವ ಬಾಧೆಯು ಇಲ್ಲ ಪ್ರತಿಬಂಧವಿಲ್ಲ,
ಅದು ಹಸಿವೆಯುಳ್ಳದಲ್ಲ. ಕಾರ್ಯಕಾರಣಗಳದಕ್ಕಿಲ್ಲ. ಅದು ಅಸಂಗವು,
ಉಪಾಧಿಗಳಿಲ್ಲದುದು. ಅದರಂತಹದು ಬೇರೊಂದಿಲ್ಲ ಆದಕ್ಕೆ "ಅಸ್ಮಿ
ಪ್ರಕಾಶೇ ನಂದಾಮಿ" ಎಂಬ ವಿಮರ್ಶವಲ್ಲದೆ ಬೇರೆಕ್ರಿಯಗಳಿಲ್ಲ. ಪು
ಣ್ಯವನ್ನು ಮೀರಿದುದು ಅದಕ್ಕೆ ಬೇರೊಂದರ ಅನುಗ್ರಹವಿಲ್ಲ. ಅದಕ್ಕೆ ಬೇ
ರೊಂದು ಅಧಿಕವಿಲ್ಲ. ಅದು ವಾಸನಾರಹಿತವಾದುದು ಆದುದರಿಂದಲೆ
ಈ ಲೋಕದಿಂದ ಆ ಲೋಕಕ್ಕೆ ಆ ಲೋಕದಿಂದ ಈ ಲೋಕಕ್ಕೆ ವಹಿಸಲ್ಪ
ಡುವ ಜೀವನಂತೆ ಅದಕ್ಕೆ ಕರ್ಮಗಳೆಂಬ ವಾಹಕಗಳಿಲ್ಲ. ಜಂಗಮವಸ್ತು
ವಿನಲ್ಲಿ ಮತ್ತೊಂದು ಪದಾರ್ಥಕ್ಕೆ ತೆರವಿಲ್ಲದರಿಂದ ಅದು ಬೇರೆ ವಸ್ತುವಿ
ನೊಡನೆ ಬೆರಿಕೆಯಾದುದಲ್ಲ ಪಾಪಪುಣ್ಯಗಳೆಂಬ ಅಘವಿಲ್ಲದುದು. ಮಾ
ಯಾ ಮೋಹರಂಜನವಿಲ್ಲದುದು. ಜಂಗಮತತ್ತ್ವವು ಕಡೆಮೊದಲುಗಳಿಲ್ಲ

CC-0. Jangamwadi Math Collection. Digitized by eGangotri

ದುದು. ಮೊದಲಿಲ್ಲನ ಜ್ಯೋತಿ ಸ್ವರೂಪವು. ಅದು ಪ್ರಭುವು. ಕೇಡಿಲ್ಲದುದು ವಾಚಂಲಕ್ಷಣದಿಂದ ಹೇಳಲಿಕ್ಕೆ ಬಾರದುದು. ಅದು ಹೋದುದಲ್ಲ ಇಂತಹ ಜಂಗಮನನ್ನು ನಾನು ಭಜಿಸುತ್ತೇನೆ.

ಈ ಶಿವವಾಕ್ಯಗಳಲ್ಲಿ-( ಕೆಳದೀಭೂಮಿಪಾಲನು ಶಿವಾಗಮವಾಕ್ಯಗಳನ್ನೆ ಉದಾಹರಿಸಿರುವನು ) ಹೇಳಿವಪ್ರತಿಯೊಂದು ಲಕ್ಷಣವು ಶ್ರೀಮದಲ್ಲಮನಲ್ಲಿದೆ— ನೋಡು—ನಿರಾಕೃತಂ ರಂಜನಂ ಯನ್ಮಾಯಾ ಮೋಹ ವಿಜೃಂಭಿತಂ—"ಬ್ರಹ್ಮಾವಿಷ್ಣುಗಳ ಮಾಯೆ ತೊತ್ತಳದುಳಿದಂದು, ದೇವದಾನವರ ಮಾಯೆ ಅಗಿದಗಿದು ತಿಂಬಂದು ರುದ್ರಗಣ ಪ್ರಮಥಗಣರೆಂಬವರಮಾಯೆ ಮರುಳ್ಮಾಡಿ ಕಾಡುವಂದು ನೊಸಲುಗಂಣು ಪಂಚಮುಖದಶಭುಜದವರಿಗೆ ಮಾಯೆ ಅರ್ಧಾಂಗಿಯಾದಂದು ಅಷ್ಟಾಶೀತಿ ಋಷಿಗಳ ತಪೋಮದದಲ್ಲಿ ಕೇಡಹುವಂದು ನಾನು ಮಾಯಾಕೋಲಾಹಲನಾಗಿರ್ದೆಕಾಣ ಗುಹೇಶ್ವರಾ"

"ನಿರ್ವಿಕಲ್ಪಂ—"ನಿಷ್ಪ್ರಕಾರಕವೆಂಬರ್ಥ ಸಕಲ ಸವಿಕಲ್ಪ ಪದಾರ್ಥಗಳಲ್ಲಿ ನಿಷ್ಪ್ರಕಾರದಿಂದಿರುವನೆಂಬರ್ಥ. "ಕಲ್ಲೊಳಗಣ ಪಾವಕದಂತೆ ಉದಕದೊಳಗಣ ಪ್ರತಿಬಿಂಬದಂತೆ ಬೀಜದೊಳಗಣ ವೃಕ್ಷದಂತೆ ಶಬ್ದದೊಳಗಣ ನಿಃಶಬ್ಧದಂತೆ ಗುಹೇಶ್ವರ ನಿಂಮ ಶರಣಸಂಬಂಧ.

"ನಿಃಸಂಜ್ಞಂ ನಿರ್ನಾಮ:—ನಿರಾಳವೆಂಬಕೂಸಿಂಗೆ ಬೆಂಣೆಯನಿಕ್ಕಿ ಹೆಸರಿಟ್ಟು ಕರೆದವರಾರೊ ಅಕಟಕಟಾ ಶಬ್ದದಲಜ್ಜೆಯನೋಡಾ ಗುಹೇಶ್ವರ.

ನಿಶ್ಶಬ್ದಂ-ಎನ್ನನಾನರಿಯದಂದು ಮುನ್ನನೀನೇನಾಗಿರ್ದೆ ಹೇಳಾ ಮುನ್ನನೀಬಾಯಿಮುಚ್ಚಿಕೊಂಡಿರ್ದೆ ಎಂಬುದ ನಾನಿನ್ನ ಕಂಣಿಂದ ಕಂಡೆನು ಎನ್ನ ನಾನರಿದಬಳಿಕ ಇನ್ನು ನೀ ಬಾಯಿದೆರೆದು ಮಾತನಾಡಿದರೆ ಅದೇನನ್ನ ಕಂಣಿಂದ ಕಂಡುನಾಚಿದೆ ನೋಡಾ ಗೊಹೇಶ್ವರಾ! ನಿಂಮ ಬೆಡಗಿನ ಬಿನ್ನಾಣವರಿದೆ" ನೋಡಾ ಭಾವವಳಿಯದೆ ಬಯಕೆ ಸವಿಯದೆ ಐಕ್ಯವು ಆವ ಘನವೆಂದಡಹುದೆ ಶಬ್ದಸಂಭ್ರಮದ ಮದವಳಿಯದೆ ತನ್ನ ಇದಿರಿನಲ್ಲಿ ಪತಿಯುಳ್ಳಡೆ ಏನಂದರುಹದೆ ಗುಹೇಶ್ವರವೆಂಬ ಶಬ್ದಸಂದಳಿಯದೆ" ಬೇಸತ್ತು ಬಯಲಾದಡೆ ಆಯತಿ ಶಿವಜ್ಞಾನ ಪ್ರಭಾವದಿಂದ ಶಿವತ್ತ್ವದ ನಿಲುವೆ ತಾನೆಂದಲ್ಲಿ ಶಬ್ದವೃತ್ತಿಗಳು ಅಡಗಿದವೆಂಬರ್ಥ.

ನಿರವಗ್ರಹಂ— ಪ್ರತಿಬಂಧರಹಿತವೆಂಬರ್ಥ— ಹಸಿವಿನಪ್ರೇಮಕೆ ಬೋನವ ಹಿಡಿವರು ತೃಷೆಯ ಪ್ರೇಮಕ್ಕೆ ಮಜ್ಜನಕ್ಕೆರೆವರು ದೇವರಿಲ್ಲ ಭಕ್ತ


CC-0. Jangamwadi Math Collection. Digitized by eGangotri

ರಿಲ್ಲ ನಾನು ಇಲ್ಲ ನೀನು ಇಲ್ಲ ಗುಹೇಶ್ವರ ಪೂಜಿಸುವರು ಪೂಜೆಗೊಂಬುವರು ಇಲ್ಲ—ಲಿಂಗಾಂಗ ಸಾಮರಸ್ಯಕ್ಕೆ ಅವಿರಳ ಚಿದಾನಂದ ಲೀನವಹುದೆ ಮಾರ್ಗವು. ಅದೇ ಅವಿರಳಲಿಂಗಾರ್ಚನೆಯು ಹೀಗಲ್ಲದವರು ಹಸಿವು ತೃಷೆಗಳ ಪ್ರತಿಬಂಧದಿಂದ ಲಿಂಗಪೂಜೆಯನ್ನಾದರು ಹಸಿವು ತೃಷೆಗಳ ನಿವಾರಣಕ್ಕೆ ಮಾಡುವರಲ್ಲದೆ ಚಿದಾನಂದಪ್ರಾಪ್ತಿಗಲ್ಲ. "ತನುಗುಣವಳಿದು ಲಿಂಗಸಂಗಿಯಾದ. ಮನಗುಣವಳಿದು ಜ್ಞಾನಸಂಬಂಧಿಯಾದ. ಪ್ರಾಣಗುಣವಳಿದು ಪ್ರಸಾದ ಸಂಬಂಧಿಯಾದ. ಭಾವಭ್ರಮೆಯಳಿದು ನಿಜಲಿಂಗ ಸಂಬಂಧಿಯಾದ. ಇಂತೀಚತುರ್ವಿಧ ಸಂಬಂಧಿಯಾಗಿ ಶೂನ್ಯಸಿಂಹಾಸನವ ನಿಂಬುಗೊಂಡ ಕಲಿದೇವರದೇವ ನಿಂಮಶರಣ ಪ್ರಭುದೇವರಪಾದಕ್ಕೆ ನಮೋ ನಮೋ ಎಂಬೆನು" ಶಬ್ದಸಂಭ್ರಮದಲ್ಲಿ ಹಿಂದುಗಾಣರು ಮುಂದುಗಾಣರು ತಂಮ ತಾವರಿಯರು ಇದುಕಾರಣ ಮೂರು ಲೋಕವೆಲ್ಲವು.

ನಿರಶನಂ–ವಿಷಯಭೋಗವಿಲ್ಲದವನು "ಬಂದ ಬಂದವರೆಲ್ಲರು ಮಿಂದುಂಡು ಹೋದರು. ಗೊಹೇಶ್ವರನಲ್ಲಯ್ಯನುಂಣದೆ ಹೋದುದನಾರು ಅರಿಯರಲ್ಲ" ಈ ಭವಕ್ಕೆಬಂದಜೀವರೆಲ್ಲರು ಸಂಸೃತಿಯೆಂಬನದಿಯಲ್ಲಿ ಮಿಂದು ಕರ್ಮ ಫಲವನುಂಡುಹೋದರು. ಅಲ್ಲಯ್ಯನೆಂಬ ಪರವಸ್ತು ಭಕ್ತಾನುಗ್ರಹಕ್ಕಾಗಿ ಕಾಯವಿಡಿದು ಚರಿಸಿದಡು ಕರ್ಮಫಲಗಳ ತೊಡಕಿಲ್ಲದಿರುವುದನ್ನು ಅರುತಿಳಿಯಲಿಲ್ಲ.

"ಹೆಂಣಿಗೆಬಂದಾತನಲ್ಲ ಹೊನ್ನಿಗೆಬಂದಾತನಲ್ಲ ಮಂಣಿಗೆ ಬಂದವನಲ್ಲ ಅಶನಕ್ಕೆ ಬಂದಾತನಲ್ಲ ವಸನಕ್ಕೆ ಬಂದಾತನಲ್ಲ ಕೂಡಲ ಚೆನ್ನಸಂಗಯ್ಯನ ಭಕ್ತಿಪಥವತೋರ ಬಂದಾತನಯ್ಯ ಪ್ರಭುದೇವರು".

ನಿಷ್ಕಾರಣಂ—ತನಗೆಮತ್ತೊಂದು ಕಾರಣವಿಲ್ಲದವನಾಗಿ ನಿತ್ಯಸಿದ್ಧನೆಂಬರ್ಥ "ನಾದಬಿಂದುಗಳಿಲ್ಲದಂದು ನಿರ್ಭಯನೆಂಬ ಗಣೇಶ್ವರನು ಉತ್ಪತ್ತಿಸ್ಥಿತೀಲಯವಿಲ್ಲದಂದು ಅಕ್ಷಯನೆಂಬ ಗಣೇಶ್ವರನು ಐದುವೇದಗಳಿಲ್ಲದಂದು ಓಂಕಾರವೆಂಬ ಗಣೇಶ್ವರನು ಯುಗಜುಗವಿಲ್ಲದಂದು ಊರ್ಧ್ವಮುಖನೆಂಬ ಗಣೇಶ್ವರನು ಗುಹೇಶ್ವರಲಿಂಗವಿಲ್ಲದಂದು ನಿರ್ಮಾಯನೆಂಬ ಗಣೇಶ್ವರನು" ನಾದ—ಶಿವ ಬಿಂದು—ಶಕ್ತಿ ಯುಗಜುಗ—ಕಾಲಾದಿ ಅಧಃಸೃಷ್ಟಿ ಗುಹೇಶ್ವರಲಿಂಗವಿಲ್ಲದಂದು–ಅಂಗಲಿಂಗವೆಂಬ ಭೇದವು ತೋರದಂದು "ಆಯ್ಯಾಜಲಕೂರ್ಮಗಜಫಣಿಯ ಮೇಲೆ ಧರೆ ವಿಸ್ತರಿಸಿನಿಲ್ಲದಂದು, ಗಗನವಿಲ್ಲದಂದು ಪವನನ ಸುಳುಹಿಲ್ಲದಂದು ಅಗ್ನಿಗೆ ಕಳೆದೋರದೆಂಸು ತರುಗಿರಿ ತೃಣ ಕಾಷ್ಠಾದಿಗಳಿಲ್ಲದಂದು ಚಂದ್ರಬಾಗ ಮಿಗಿಲೆನಿ

CC-0. Jangamwadi Math Collection. Digitized by eGangotri

ಸಿದ ಹದಿನಾಲ್ಕು ಭುವನ ನೆಲೆಗೊಳ್ಳದಂದು ನಿಜವನರಿದಿಹರೆಂಬ ಜಗತ್ರ್ಪಯದಧಿಪತಿಗಳಿಲ್ಲದಂದು, ತೋರುವ, ಬೀರುವ ಭಾವದ ಸರಿಯಭಾವದಲ್ಲಿ ಭರಿತಾಗಮ್ಯ ಗೊಹೇಶ್ವರಸಿರಾಳವು" ಪಂಚಭೂತದಿಂದಾಗಲಿ ಅವುಗಳ ಕಾರ್ಯಗಳಾದ ಭುವನಾದಿ ಭೌತಿಕಗಳಿಂದಾಗಲಿ ಆಗದ ನಿತ್ಯಸಿದ್ಧವೆಂಬರ್ಥ.

ನಿಷ್ಫಲಂ—ತನ್ನಿಂದ ಜಡಕಾರ್ಯವಾವುದೂ ಜನಿಸದವನೆಂಬರ್ಥ ಲೋಕದಲ್ಲಿ ತಾನು ಮತ್ತೊಂದರಿಂದ ಹುಟ್ಟಿದಕಾರ್ಯವು ನಶ್ವರವಾಗಿರುವಂತೆ ತನ್ನಿಂದ ಕಾರ್ಯವು ಹುಟ್ಟಿದ ಕಾರಣವು ನಶ್ವರವಾಗಿರುವುದುಂಟು. ಬಾಳೆಯಗಿಡಕ್ಕೆ ಬಾಳೆಯಕಾಯಿಯಗಡವು ಹುಟ್ಟಿದುದೆ ಆಗಿಡದ ಅವಸಾನಕ್ಕೆ ಕಾರಣವು. ಆದುದರಿಂದ ನಿತ್ಯ ಸಿದ್ಧವಸ್ತು ಕಾರ್ಯಕಾರಣ ಭಾವಗಳನ್ನು ಮೀರಿದುದಾಗಿದೆ. ''ಮೊಲೆಇಲ್ಲದಾವಿಂಗೆ ತಲೆಯ ಮೊಲೆ ಮನದಲ್ಲಿ ಉಂಟುಕಂಡಾ ತಾ ಸತ್ತು ಹಾಲುಕುಡಿಯಬಲ್ಲರೆ ಗೊಹೇಶ್ವರನೆಂಬಲಿಂಗವು ತಾನೇಕಂಡಾ" ಮೊಲೆ ಇಲ್ಲದಾವು-ಕಾರ್ಯಕಾರಣತ್ವವೆರಡಿಲ್ಲದಅಮೃತಬಿಂದುವೆಂಬ ಪರವಸ್ತು. (ಶ್ರೀಪ್ರಭುದೇವರ ವಚನಕ್ಕೆ ಕುಮಾರ ಬಂಕನಾಥ ದೇವರ ಟೀಕೆ.)

ನಿಸ್ಸಂಗಂ—'' ಆದಿಯಸಂಗದಿಂದಾದವನಲ್ಲ ಸಂಗಸುಖದೊಳಗಿದ್ದವನಲ್ಲ ಇಬ್ಬರ ಸಂಗದಿಂದಾದವನಲ್ಲ ರವಿಶಶಿಯ ಬೆಳಗಿನಿಂದ ಬೆಳೆದವನಲ್ಲ ನಾದಬಿಂದುಕಳೆ ಹುಟ್ಟದಮುನ್ನ ಅಲ್ಲಿಂದತ್ತ ಗುಹೇಶ್ವರಯ್ಯ" '' ಅಂಗವಿಲ್ಲಾಗಿ ಅನ್ಯಸಂಗವಿಲ್ಲ ಅನ್ಯಸಂಗವಿಲ್ಲಾಗಿ ಮತ್ತೊಂದು ವಿವರಿಸಲಿಲ್ಲ ಮತ್ತೊಂದು ವಿವರಿಸಲಿಲ್ಲಾಗಿ ನಿಸ್ಸಂಗವಾಯಿತಯ್ಯ ಗೋಹೇಶ್ವರ"

ನಿರುಪಾಧಿಕಂ—ದೇಹಬುದ್ಧ್ಯಾದಿ ಉಪಾಧಿಗಳಿಲ್ಲದವನು–" ಕಾಯ ಭಿನ್ನವಾಯಿತೆಂದು ಮುಟ್ಟಿಸುವರು ಲಿಂಗವನು-ಮುಟ್ಟಲಾಗದು ಲಿಂಗವ: ಮುಟ್ಟಿದಾತ ಮುಂದೆಹೋದ: ಮುನ್ನ ಮುಟ್ಟಿದವರೆಲ್ಲ ಉಪಜೀವಿಗಳಾದರು ಮುಟ್ಟಿದವರಿಗೆ ಗತಿಯುಂಟೆ ಗುಹೇಶ್ವರ." ಸತ್ತು ಪಾಪಕ್ಕೆ ಹೋದಹೆನೆಂದಂಜಿ ಲಿಂಗವಧರಿಸಿ ಪೂಜಿಸುವವು ಅಂತಪ್ಪವರೆಲ್ಲ ಸತ್ತು ರುದ್ರಲೋಕದಲ್ಲಿ ಚತುರ್ವಿಧ ಫಲಪದವಿಯ ಪಡೆದರು. ಇದು ಕಾರಣ ದೇಹಾದ್ಯುಪಾಧಿಯಿಂದ ಲಿಂಗವ ಪೂಜಿಸದೆ ಸಹಜಲಿಂಗವೇದಿಯಾದರೆ ಆತನೆ ಶರಣನು—ಕುಮಾರ ಬಂಕನಾಥ ದೇವರ ಟೀಕೆ.

ನಿರುಪಮಂ—ತನಗೆ ಹೋಲಿಸ ಬಹುದಾದುದೇನೂ ಇಲ್ಲದವನೆಂಬ
CC-0. Jangamwadi Math Collection. Digitized by eGangotri

ರ್ಥ. ಸುಜ್ಞಾನ ಭರಿತ ನಿರುಪಮ ಸುಖಿವೆಂಬ ತಾತ್ಪರ್ಯ —"ಧಾತು ಮಾತು ಪಲ್ಲಟಸಿದಡೆ ಗಮನವಿನ್ನೆಲ್ಲಿಯದೊ ಧ್ಯಾನಮೌನವೆಂಬುದು ತನುಗುಣ ಸಂದೇಹವಯ್ಯ ಸುಜ್ಞಾನಭರಿತ ಅನುಪಮ ಸುಖಿ ಗೊಹೇಶ್ವರ ನಿಂಮ ಶರಣನು.

ಭಿನ್ನವಾದ ಬಾಹ್ಯ ವಿಷಯಗಳ ಜ್ಞಾನವನ್ನು ಮಾತುಗಳ ಪಲ್ಲಟ ದಿಂದ ಅಂದರೆ ತಿರುವುಮುರುವಿನಿಂದ ಹೇಳಬಹುದು. ಆದರೆ ತನ್ನ ನಿಜವನು ಗಮನಿಸಲು ಅಂದರೆ ತಿಳಿಯಲು ಮಾತಿನ ಪಲ್ಲಟವು ಸಾಲದು. ಆನಿಜವು ಗಮನಕ್ಕೆ ಬಾರದು. ತಿಳಿಯದು. ಹಾಗಾದರೆ ನುಡಿಯನ್ನು ಬಿಟ್ಟು ಧ್ಯಾನ ಮೌನದಿಂದರಿಯಬಹುದೆಂದರೆ ಈ ಧ್ಯಾನಮೌನಗಳು ತನುಗುಣ ವಾದುದರಿಂದ ವಸ್ತು ಸಾಕ್ಷಾತ್ಕಾರವಾಗಲಾರದು. ವಚನದಿಂದ ಹೇಳಲು ಬಾಹ್ಯವಲ್ಲ. ಧ್ಯಾನಮೌನದಿಂದರಿಯಲು ಅಂತರವಲ್ಲ ಪರಿ ಪೂರ್ಣ ಪರಬ್ರಹ್ಮವಸ್ತುವು ಅಭಿಮಾನ ರಹಿತವಾದ ಸಹಜಸ್ಥಿತಿಯಿಂದ ಪ್ರಕಾಶಿಸುವದಾದುದರಿಂದ ಅನುಪಮವಾದುದು.

ನಿಪ್ಪ್ರಕ್ರಿಯಂ—ಬಾಹ್ಯಕ್ರಿಯಾಕಲಾಪಗಳಿಲ್ಲದುದೆಂಬರ್ಥವು " ಹೂವಕೊಯ್ಯಹೋದರೆ ಹೂ ದೊರಕೊಳ್ಳವು. ಅಗ್ಗವಣಿಯ ತುಂಬುವರೆ ಅಗ್ಗವಣಿ ತುಂಬದು. ಪೂಜಿಸಹೋದರೆ ಪೂಜನೆಗೊಳ್ಳದು. ಇದೇನು ಸೋಜಿಗವೊ ಅಯ್ಯ ! ಅರಿದು ಮರಿದವನಲ್ಲ ಬೆರಗು ಹಿಡಿದವನಲ್ಲ ಗೊಹೇಶ್ವ ನೆಂಬುದಿಂತುಟು" ಸರ್ವಾಂಗ ಲಿಂಗಸ್ವಾಯತವಾಗಿ ಲಿಂಗಭಾವದಲ್ಲಿ ಭರಿತವಾದ ಶರಣನ ಸರ್ವೇಂದ್ರಿಯ ದ್ವಾರದೊಳಗೆ ತೋರುವವೆಲ್ಲವು ಲಿಂಗ ಮಯವಾಗಿಪ್ಪವಾಗಿ ಆತ ಮಾಡುವ ಅಷ್ಟ ವಿಧಾರ್ಚನೆ ಷೋಡಶೋಪ ಚಾರಗಳೆಲ್ಲವು ಲಿಂಗಮಯವಿರ್ಪವಾಗಿ ಆತನು ಅನ್ಯ ಕ್ರಿಯಗಳನರಿಯ ನೆಂಬರ್ಥ. ಕುಮಾರ ಬಂಕನಾಥ ದೇವರ ಟೀಕೆ.

ಇಂತನಂತ ವಚನಗಳನ್ನುದಾಹರಿಸಬಹುದು ಗ್ರಂಥವಿಸ್ತರ ಭಯಕ್ಕಾಗಿ ವಿರಮಿಸುತ್ತೇನೆ. ಇವೆಲ್ಲ ಉದಾಹರಣಗಳಿಂದ ಶ್ರೀಮದಲ್ಲಮನು ಅನಾದಿ ಜಂಗಮವಹುದು.

ಇಂತಪ್ಪ ಅನಾದಿಜಂಗಮ ಪರವಸ್ತು ವೀರಶೈವ ಮತೋಧಾರಕ್ಕಾಗಿ ಅವತರಿಸಿತು. ಸಾಮಾನ್ಯ ಮನುಷ್ಯನಾಗಿ ತಪಶ್ಚರ್ಯದಿಂದಲೂ ಶಿವ ಭಕ್ತಿ ವಿಶೇಷದಿಂದಲೂ ಪ್ರಾಕೃತಭಾವವನ್ನು ಗೆದ್ದವನಾದೊಡೆಯು ಪೂಜ್ಯನೆನ್ನುವ ಶಿವವಾಕ್ಯಗಳನೇಕವಾಗಿವೆ "ಅಪಿ ವಾಯುಶ್ಚಂಡಾಲಃ ಶಿವೇತಿ ವಾಚಂ ವದೇತ್ತೇನ ಸಹವಸೇತ್ತೇನ ಸಹ ವಿಶೇತ್ತೇನ ಸಹಭುಂಜೀತ ತೇನ

CC-0. Jangamwadi Math Collection. Digitized by eGangotri

ಸಹ ಭುಂಜೀತ" ಆವನೊಬ್ಬ ಚಾಂಡಾಲನು ಅನ್ಯೋಕ್ತಿಗಳನ್ನು ಬಿಟ್ಟು ಶಿವಾಚಾರಪರನಾಗಿ ಶಿವಮಂತ್ರಧರನಾಗಿಹನೊ ಆತನೊಡನೆ ನುಡಿಯಬಹುದು, ಆತನೊಡನೆ ವಾಸಿಸಬಹುದು ಆತನೊಡನೆ ಪ್ರವೇಶಿಸಬಹುದು. ಆತನೊಡನೆ ಉಣಬಹುದು. ಉಣಬಹುದು. ಈ ತತ್ತ್ವವನ್ನು ಪ್ರತ್ಯಕ್ಷವಾಗಿ ನೆಲೆಗೊಳಿಸಲಿಕ್ಕೆಯೇ, ಶಿವಾಜ್ಞೆಯಿಂದ ಶ್ರೀವೀರಭದ್ರಾದಿ ಮಹಾಗಣೇಶ್ವರರು ಮಾಚಿದೇವಾದಿ ನಾಮಗಳಿಂದ ಉಚ್ಚ ನೀಚಕುಲಗಳಲ್ಲಿ ಜನಿಸಿ ಅಪ್ರಾಕೃತ ಶಿವಾಚಾರಪರನಲ್ಲಿ ಜಾತ್ಯಾದಿಗಳಿಲ್ಲವೆಂಬುದನ್ನು ಸ್ಥಾಪಿಸಿರುವರು ನೋಡು—" ವೀರೇಶ್ವರಾದ್ಯಾಃ ಪ್ರಮಥೇಶ್ವರಾಂಶ್ಚ। ಕ್ಷಿತೌ ಕ್ರಮೇಣೈವ ಕೃತಾವತಾರಾಃ॥ ಪ್ರತ್ಯಕ್ಷಸಿದ್ಧೈರತುಲಪ್ರಭಾವೈಃ॥ ಸ್ಥಿರೀಕರಿಷ್ಯಂತಿ ಸದಾಶಿವಾಜ್ಞಾಮ್" "ಅಥಝುಟಿತಿ ಶಿವಾಜ್ಞಾಂಕರ್ತುಮತ್ಯುಚ್ಚನೀಚೇ। ಷ್ವಪಿಜನನಮವಾಪುಃ ಶಂಭುಭೃತ್ಯಾಃ ಕುಲೇಷು। ಮಣಯ ಇವ ಮಹಾರ್ಘಾ ರೋಹಣಾಂಭೋಧಿ ಶುಕ್ತಿ ಷ್ವಪಹತ ಪರಿ ಪಂಥಿಧ್ವಾಂತ ವೃಂದಾ ಮಹೋಭಿಃ॥" ಶಿವತತ್ತ್ವರತ್ನಾಕರ ೪ ಕಲ್ಲೋಲ ೯ ತರಂಗ ೧೨-೩೨ ಎಲೆ ವೃಷಭೇಶನೆ ವೀರೇಶ್ವರನೆ ಮೊದಲಾದ ಪ್ರಮಥಶ್ರೇಷ್ಠರು ಭೂಮಿಯಲ್ಲಿ ಅವತರಣಂಗೆಯ್ದು ಲೋಕ ಪ್ರತ್ಯಕ್ಷವಾದ ಅತುಲ ಪ್ರಭಾವಗಳಿಂದ ಶಿವಾಗಮಗಳ ಅರ್ಥವನ್ನು ಗಟ್ಟಿಗೊಳಿಸುವರು.— ಆಮೇಲೆ ಅವಿಲಂಬದಿಂದಲೆ ಶಿವಶಾಸನವನ್ನು ಪಾಲಿಸಲೆಂದು ಶಂಭುಭೃತ್ಯರಾದ ಪ್ರಮಥರು ಅತ್ಯುಚ್ಚವಾದ ಮತ್ತು ನೀಚವಾದ ಕುಲಗಳಲ್ಲಿ ಜನ್ಮವನ್ನು ತಾಳಿದರು. ಮಹಾರ್ಘವಾದ ಮಣಿಗಳು ಅತ್ಯುಚ್ಚವಾದ ರೋಹಣ ಗಿರಿಯಲ್ಲಿಯೂ ಅಗಾಧವಾದ ಸಮುದ್ರದಲ್ಲಿಯೂ ಹುಟ್ಟುವಂತೆ ತುಚ್ಛವಾದ ಚಿಪ್ಪಿನಲ್ಲಿಯೂ ಉಂಟಾಗುವವು. ಆರತ್ನಗಳೂ ಮಣಿಗಳೂ ತಮ್ಮ ಪ್ರಕಾಶದಿಂದ ಕತ್ತಲೆಯನ್ನು ಚದರಿಸುವಂತೆ ಈ ಶರಣರು ಶಿವಮತ ವಿರೋಧಿಗಳೆಂಬ ಕತ್ತಲೆಯನ್ನು ಪರಿಹರಿಸುವರು.

ಶ್ರೀಬಸವ ಭೂಮಿಪಾಲನು ಈ ಪ್ರಮಾಣಗಳನ್ನು ಪುರಾಣಾಗಮಾದಿಗಳಿಂದ ಉದಾಹರಿಸಿರುವನು. ಸ್ವಕಪೋಲದಿಂದ ಕಲ್ಪಿಸಿಲ್ಲ. ನೋಡು ಧರ್ಮಪ್ರವೃತ್ತಿಂ ಶಿಥಿಲಾಂ ವಿಲೋಕ್ಯ ಚ ಸಮಂತತಃ। ಅವತೀರ್ಯ ದಯಾವಶ್ಯೋ ಭಗವಾನ್ವೃಷವೇಶ್ವರಃ। ಧರ್ಮಂ ಸಂಸ್ಥಾಪಯಾಮಾಸ ಸರ್ವಮೇವ ಧರಾತಲೇ। ವೀರಶೈವಮತಂ ಸ್ಥಾಪ್ಯ ಪ್ರಕಾಶನಮಕಾರಯತ್॥ ತಸ್ಯಾವಿರ್ಭಾವ ಮಧುನಾ ವಿಚಿತ್ರಂ ಕಥಯಾಮಿತೇ। ಮಿಥಃ ಸಂವಾದ ರೂಪೇಣ ಪುರಾಣಾಂತಃ ಪ್ರತಿಷ್ಠಿತಮ್॥ ಶಿವತತ್ತ್ವರತ್ನಾಕರ ೪ ಕಲ್ಲೋಲ ೮ ತರಂಗ-ಶ್ಲೋಕ ೧೮-೧೯ ಸುತ್ತಲು ಧರ್ಮ ಪ್ರವೃತ್ತಿ

CC-0. Jangamwadi Math Collection. Digitized by eGangotri

ಯುಶಿಥಿಲವಾದುದನ್ನು ಕಂಡು ದಯಾಪರವಶನಾದ ಷಡ್ಗುಣೈಶ್ವರ್ಯ ಸಂಪನ್ನನಪ್ಪ ಬಸವೇಶ್ವರನು ಭೂತಲದಲ್ಲಿ ಧರ್ಮವನ್ನು ಸಮಗ್ರವಾಗಿ ಸ್ಥಾಪಿಸಿದನು. ವೀರಶೈವಮತವನ್ನು ಸ್ಥಾಪಿಸಿ ಪ್ರಕಾಶನಂಗೈದನು. ಪುರಾಣ ದಲ್ಲಿ ಪರಸ್ಪರ ಸಂವಾದ ರೂಪದಿಂದ ಇದ್ದ ವಿಚಿತ್ರವಾದ ಅವನ ಅವತಾ ರ ಕಥೆಯನ್ನು ಹೇಳುತ್ತೇನೆ.

ಶಿವಲಿಂಗಧರನಾಗಿ ಶಿವಾಚಾರ ಪರನಲ್ಲಿ ಜಾತಿಗುಣಗಳಿಲ್ಲ ವೆಂಬ ಶಿವಾಚಾರವನ್ನು ಶರಣರು ಉಚ್ಚ ನೀಚ ಕುಲಗಳಲ್ಲಿ ಹುಟ್ಟಿತೋರಿಸಿದರು. ಮತ್ತು ವೀರಶೈವರಾದುದರಿಂದ ಈ ಜಾತಿ ಮಾಲಿನ್ಯ ವಿಲ್ಲದವರಲ್ಲಿಯೂ ಜನಿಸಿ ವ್ಯಕ್ತಗೊಳಿಸಿದರು. ಶ್ರೀಬಸವೇಶನಂತಹರು ಬ್ರಾಹ್ಮಣರಲ್ಲಿಯೂ ಶ್ರೀಮತ್ಕಕ್ಕಯ್ಯನಂತಹರು ಡೋರರಲ್ಲಿಯೂ ಜನಿಸಿದಂತೆ ಪ್ರಭುವು ಸು ಜ್ಞಾನನಿರಹಂಕಾರರೆಂಬ ವೀರಶೈವ ದಂಪತಿಗಳಲ್ಲಿ ಅವತರಿಸಿದನು. ಮೇಲೆ ಶ್ರೀಬಸವೇಶನ ವಿಷಯಕ್ಕೆ ಉದಾಹರಿಸಿನ ಆಗಮ ವಚನಗಳುಳ್ಳ ಮೂಲ ಗ್ರಂಥಗಳು ನಮಗೆ ದೊರಕಿಲ್ಲವಾದರು ವಾತೂಲಾಗಮಾಗ ಮಾಂತರ್ಗತವಾದ ಅನುಭವ ಸೂತ್ರವೆಂಬ ಮೂಲಗ್ರಂಥದಲ್ಲಿ ನಮಗೆ ಶ್ರೀಬಸವ ಚನ್ನಬಸವ ಅಲ್ಲಮರಹೆಸರುಗಳು ಉಪಲಭಿಸುತ್ತವೆ. ಅ ದರ ಮೇಲಿಂದ ಶಿವತತ್ತ್ವರತ್ನಾಕರ ಕಾರನು ಉದಾಹರಿಸಿದ ಶ್ಲೋಕಗಳು ಆಗಮದಲ್ಲಿರುತ್ತವೆಂಬುದು ಕಂಡುಬರುತ್ತಿದೆ. “ವಾತುಲೋತ್ತರ ತಂ ತ್ರಂಚ ಕಾಲಜ್ಞಾನಂ ಪುರೋಹಿತಂ ; ಶ್ರೀಷ್ಮಂ ಸರ್ವಾತ್ಮಕಂ ಶರ್ವಂ ಶು ದ್ಧಂ ನಿತ್ಯಮಹಾರಮುಮ್ ವಿಶ್ವಂ ವಿಶ್ವಾತ್ಮಕಂ ತತ್ತ್ವಂ ದ್ವಾದಶಸ್ಯುಸ್ತು ವಾತುಲೇ ” ಉತ್ತರ ಕಾರಣಾಗಮ ಪ್ರತಿಷ್ಠಾತಂತ್ರ ತಂತ್ರಾವತಾರ ಪಟ ಲ–ಈ ಉತ್ತರ ತಂತ್ರದಲ್ಲಿ ತಂತ್ರೋತ್ತರ ಪ್ರದೀಪವೆಂಬ ಭಾಗವಿದೆ ಅ ದರಲ್ಲಿ ಶಿವಸಿದ್ಧಾಂತ ತಂತ್ರವೆಂಬ ಉಪಭಾಗವಿರುವದು. ಆ ಉಪಭಾಗವೇ ಅನುಭವ ಸೂತ್ರ ವಿಶೇಷಾರ್ಥ ಪ್ರಕಾಶಿಕೆ ಎಂಬ ಹೆಸರಿನಿಂದ ಶ್ರೀಮಾ ಯಿದೇವನಿಂದ ಸಂಗ್ರಹಿಸಲ್ಪಟ್ಟಿವೆ. ಆ ಗ್ರಂಥದಲ್ಲಿ ಶ್ರೀಬಸವ ಚನ್ನಬಸವಾಲ್ಲ ಮರ ಹೆಸರುಗಳು ಕಂಠದಿಂದಲೆ ಹೇಳಲ್ಪಟ್ಟವೆ ನೋಡು—“ಕಾಮಿಕಾ ದ್ಯಾವಾತುಲಾಂತಾಃ ಶಿವೇನೋಕ್ತಾಃ ಶಿವಾಗಮಾಃ। ತೇಷು ವಾತುಲ ಸಂ ಜ್ಞೋಯಂ ಸರ್ವೋತ್ಕೃಷ್ಟೋ ಮಹಾಗಮಃ ॥ ವಾತುಲಾಖ್ಯೇ ಮಹಾತಂತ್ರೇ ಪೂರ್ವೋತ್ತರವಿಭೇದತಃ। ಭಾಗದ್ವಯಂ ಸಮಾಖ್ಯಾತಂ ತಸ್ಮಿನ್ನುತ್ತರನಾ ಮನಿ । ತಂತ್ರೋತ್ತರ ಪ್ರದೀಪಾಖ್ಯಂ । ಶಿವಸಿದ್ಧಾಂತ ತಂತ್ರಕಂ । ಅಸ್ತಿ ತತ್ರಾಹದೇವೇಶೋ ದೇವ್ಯೈ ಷಟ್ಸ್ಥಲನಿರ್ಣಯಂ ” ॥

CC-0. Jangamwadi Math Collection. Digitized by eGangotri

ಕಾಮಿಕಾದಿ ವಾತುಲಾಂತವಾದ ಶಿವಾಗಮಂಗಳು ಶಿವನಿಂದುಕ್ತ

ವಾಗಿವೆ. ಅವುಗಳಲ್ಲಿ ವಾತುಲದಲ್ಲಿ ಪೂರ್ವೋತ್ತರವೆಂದು ಎರಡುಭಾಗಗಳಿವೆ. ಇದು ಸರ್ವೋತ್ಕೃಷ್ಟ ವಾದಾಗಮವು. ಈ ಉತ್ತರಭಾಗನಲ್ಲಿ ತಂತ್ರೋತ್ತರ ಪ್ರದೀಪವೆಂಬ ಶಿವಸಿದ್ಧಾಂತವದೆ. ಅದರಲ್ಲಿ ಶಿವನು ಪಾರ್ವತಿಗೆ ಷಟ್‌ಸ್ಥಲ ನಿರ್ಣಯುವನ್ನು ಹೇಳಿರುವನು.

ಈ ಷಟ್‌ಸ್ಥಲ ಪ್ರತಿವಾದಕವಾದ ಶಿವಸಿದ್ಧಾಂತದಲ್ಲಿ ವಿಶೇಷಾರ್ಥ ಪ್ರಕಾಶಿಕೆಯ ಪಂಚಮಾಧಿಕರಣದಲ್ಲಿ "ಪಾರ್ಥಿವಕಾಯೋ ವೃಷಭಸ್ತೈಜಸಕಾಯಸ್ತು ಚನ್ನವೃಷರಾಜಃ। ವೈಯತಕಾಯೋಲ್ಲಮ ವಿಭುರಿತ್ಯೇತೇಂ ಕಾಯ ಭೇಧ ಉಪದಿಷ್ಟಃ"॥ ವೃಷಭನು ಪೃಥ್ವೀ ತತ್ತ್ವದ ಕಾಯವುಳ್ಳವನು. ಚೆನ್ನಬಸವರಾಜನು ತೈಜಸಕಾಯನು ಅಲ್ಲಮವಿಭುವು ಆಕಾಶಕಾಯನು ಎಂದು ಸ್ಪಷ್ಟವಾಗಿ ಕಂಠೋಕ್ತಿಯುಂಟು ಆದುದರಿಂದ ಬಸವಾದ್ಯವತಾರಗಳು ವಾತುಲಾಗಮದಲ್ಲಿಯೂ ಸೂಚಿಸಲ್ಪಟ್ಟವೆ ಯಂಬಲ್ಲಿ ಸಂಶಯವಿಲ್ಲ.

ಪ್ರಭುವು ನಿರಹಂಕಾರ ಸುಜ್ಞಾನಿಗಳಿಗೆ ಅಯೋನಿಜವಾಗಿ ಪ್ರಕಟನಾದನು. ಇದಕ್ಕೆ "ಇಬ್ಬರಸಂಗದಿಂದಾದವನಲ್ಲ" ಎಂಬ ಆತನ ಉಕ್ತಿಯು ನಿದರ್ಶನವಾಗಿದೆ. ಪರಮಾತ್ಮನು ಕರ್ಮದಿಂದ ಶರೀರ ಗ್ರಹಣವನ್ನು ಮಾಡುವದಿಲ್ಲ. ಆದರೆ ಭಕ್ತರ ಅನುಗ್ರಹಕ್ಕಾಗಿ ಆಗಲಿ ಲೋಕದ ಉದ್ಧಾರಕ್ಕಾಗಿ ಯಾಗಲಿ ಸ್ವೇಚ್ಛೆಯಿಂದ ಶರೀರವನ್ನು ತಾಳುವನು. ಅವನದಿವ್ಯ ಚಿತ್ತಕ್ಕೆ ಬಂದರೆ ಯೋನಿಜನಾಗಿಯು ಜನಿಸಬಲ್ಲನು. ಅಯೋನಿಜನಾಗಿಯು ತೋರಬಲ್ಲನು. ಯೋನಿಜನಾದರು ಆತನಿಗೆ ಗರ್ಭವಾಸದ ದುಃಖಗಳಿಲ್ಲ. ಸ್ವತಂತ್ರನಿಗೆ ದುಃಖವಿರಲಾರದು. ದುಃಖಕ್ಕೆ ಅಜ್ಞಾನ ಕರ್ಮಗಳೀಡಾಗಿರುವುದೆ ಕಾರಣವು ಈಶನಲ್ಲಿ ಇವೆರಡೂ ಸಂಬಂಧ ವಾಗದರಿಂದ ಅವನಿಗೆ ದುಃಖವಿಲ್ಲ.

ಈ ನಿರಹಂಕಾರ ಸುಜ್ಞಾನಿಗಳು ನಿಜವಾಗಿಯೆ ನಿರಹಂಕಾರನೂ, ಸುಜ್ಞಾನಿಯೂ ಆಗಿದ್ದರು. ಲೋಕದಲ್ಲಿ ಅಮೃತಪ್ಪನೆಂದು ಹೆಸರಿಟ್ಟುಕೊಂಡು ಯಮನ ದವಡೆಯಲ್ಲಿ ಬೀಳುವ ನರನಂತೆಯೂ ಸಾವಿತ್ರಿಮಯೆಂದು ಕರೆಯಿಸಿಕೊಂಡು ಪತಿಯನ್ನು ನೀಗುವ ಸ್ತ್ರೀಯಂತೆಯೂ ಹೆಸರಿಗೆ ಮಾತ್ರ ಹೆಸನಾದವರಿದ್ದಿಲ್ಲ. ಅನಾದಿ ಜಂಗಮ ಮೂರ್ತಿಯು ಈ ಲೋಕದಲ್ಲಿ ಸಾಕಾರವಾಗಿ ಚರಿಸುವುದಕ್ಕೆ ನಿಮಿತ್ತವಾಗಬೇಕಾದ ಸ್ತ್ರೀಪುರುಷರು ಸಾಮಾನ್ಯರಾಗಿರಲ್ಲಾರರು.

CC-0. Jangamwadi Math Collection. Digitized by eGangotri

## ನಿರಹಂಕಾರ ಸುಜ್ಞಾನಿಗಳ ಸ್ವರೂಪವು.

ಸಕಲ ಜೀವಭಾವದ ತೋರಿಕೆಗೆ ಅಹಂಕಾರವು ಮೂಲವು. ಅಹಂಕಾರ ವಿರದಿದ್ದಡೆ ಆತ್ಮನಿಗೆ ಸಂಸೃತಿಯ ಜಂಜಡವು ತೋರುತಿರಲಿಲ್ಲ. ಊರ್ಧ್ವಸೃಷ್ಟಿಯಂತಲು ಅಧಃ ಸೃಷ್ಟಿಯೆಂತಲು ಸೃಷ್ಟಿಯು ಎರಡು ತೆರನಾದುದು. ಊರ್ಧ್ವಸೃಷ್ಟಿಯೆಂದರೆ ತ್ರಿಗುಣಾತ್ಮಕ ವಪ್ಪ ಸತರಜಸ್ತಮೋಗುಣಗಳ ಸಂಪರ್ಕವಿಲ್ಲದ ಒಂದೆ ಪರಶಿವನೆಂಬ ವಸ್ತುವಿನಲ್ಲಿ ಅಂಗಲಿಂಗವೆಂಬ ತೋರಿಕೆಯು. ಈ ತೋರಿಕೆಯಲ್ಲಿ ಅಜ್ಞಾನವಿರದರಿಂದ ಸಂಸಾರ ಬಂಧವಿಲ್ಲ. ಈ ಅರ್ಥವನ್ನು ಶಿವಸಿದ್ಧಾಂತ ತಂತ್ರದಿಂದ ಶ್ರೀಮಾಯಿದೇವನು ಅನುಭವಸೂತ್ರದ ದ್ವಿತೀಯಾಧ್ಯಾಯದಲ್ಲಿ ಸಂಗ್ರಹಿಸಿರುವನು ನೋಡು—"ಉಪಾಸ್ಯತ್ವಂ ತಥೋಪಾಸಕತ್ವಂ ಚ ಪರಮಃ ಶಿವಃ । ಅಪ್ರಚ್ಯುತಾತ್ಮಭಾವೇನ ಸ್ಥಿತಃ ಸನ್ನಾತ್ಮಲೀಲಯಾ। ಸ್ವಶಕ್ತ್ಯಾಯುಗಪತ್ಸಾಕ್ಷಾ ತ್ತಪ್ರಾಪ್ತ ಏವಸ್ವಯಂ ಕ್ರಮಾತ್ । ನಾಶಿವಸ್ಯ ಶಿವೋಪಾಸ್ತಿರ್ಘಟತೇ ಜನ್ಮ ಕೋಟಿಭಿಃ" ಪರಮಃಶಿವನು ತನ್ನ ಲೀಲೆಯಿಂವ ಸ್ವರೂಪದಲ್ಲಿ ವಿಕಾರವನ್ನೈದದ್ದೆ ಒಂದೇಸಮಯದಲ್ಲಿ ಉಪಾಸ್ಯನೆಂದೂ ಉಪಾಸಕನೆಂದೂ ಭೇದವನು ಹೊಂದಿದನು. ಈ ಉಪವಾಸ್ಯೋಪಾಸಕ ಭಾವವು ಅಥವಾ ಪೂಜಃ ಪೂಜಕ ಸಂಬಂಧವು ಒಬ್ಬಶಿವನಲ್ಲಿಯ ಘಟಿಸುವುದಲ್ಲದೆ ಶಿವನಲ್ಲದವನು ಶಿನನನ್ನು ಕೋಟಿಜನ್ಮಗಳಿಂದಲೂ ಅರ್ಚಿಸಲಾರನು ಇದು ಸಿದ್ಧಾಂತವು ಇದನ್ನೀಗ ವಿವರಿಸಲು ಹವಣಿಸುವೆನು.

## ಸ್ಥಲವು.

ಈ ಸಕಲ ಪ್ರಪಂಚದ ಸೃಷ್ಟಿ ಸ್ಥಿತಿಲಯಂಗಳಿಗೆ ಅಂದರೆ ಪ್ರಪಂಚದ ಸೃಷ್ಟಿಸ್ಥಿತಿಲಯವೆಂಬ ಚಿತ್ರಕ್ಕೆ ಭಿತಿಯಂತಿರುವ ಒಂದ ವಸ್ತುವು ಸ್ಥಳವೆನಿಸುತ್ತದೆ. ಏಕಂದರೆ ಅದು ಈ ಪ್ರಪಂಚಕ್ಕೆ ಆಧಾರವಾದುದೂ ಆಪ್ರಪಂಚವು ಅಡಗಲಿಕ್ಕೆ ಲಯವಾದುದೂ ಆಗಿಹುದು. ಸ್ಥಲವೆಂ ಶಬ್ದದಲ್ಲಿ "ಸ್ಥ" ಎಂಬಕ್ಷರವು ಸ್ಥಾನವನ್ನು ಅಂದರೆ ಹುಟ್ಟುವ ಮತ್ತು ಹುಟ್ಟದ ವಸ್ತುವು ನಿಲ್ಲುವ ವಸ್ತುವನ್ನೂ ಮತ್ತು "ಲ" ಎಂಬವರ್ಣವು ಹುಟ್ಟಿದ ವಸ್ತು ಲಯವನ್ನೈನುವ ಮೆಟ್ಟನ್ನು ಬೋಧಿಸುತ್ತವೆ. ಸ್ಥಲವೆ ಶಿವನೆಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟದೆ. ಶಿವಶಬ್ದವಾದರು "ಶೇರತೆ ಅಸ್ಮಿಸ್ ಭುವನಾನಿ ಇತಿ ಶಿವಃ" ಎಂಬ ಉತ್ಪತ್ತಿಯಿಂದ ಸಕಲಭುವನಂಗಳ ಆಧಾರಸ್ಥಾನ ವಾಗಿಹ ಪದಾರ್ಥವನ್ನು ಬೋಧಿಸುತ್ತದೆ. ಇರತಪ್ಪ ಶಿವನು ಸಚ್ಚಿದಾನಂದ ಸ್ವರೂಪ ನಾಗಿಹನು. ಸಮಸ್ತ [illegible] ಚೇತನಾ ಚೇತನ

CC-0. Jangamwadi Math Collection. Digitized by eGangotri

ಪ್ರಪಂಚಕ್ಕೆಲ್ಲ ಹೇತುವಾದುದರಿಂದ ಅದು ಮತ್ತೊಂದು ಕಾರಣವಿಲ್ಲದು ದು ಅದರಿಂ ದಲೆ ಸದ್ರೂಪವಾಗಿಹುದು. ತಾನೆ ಸರ್ವತೋರಿಕೆಗೆ ಕಾರಣವಾದುದರಿಂದ ತನ್ನ ತೋರಿಕೆಗೆ ಪ್ರಮಾಣ ಪ್ರಮೇಯ ಪ್ರಮಾತೃವೆಂಬ ಸಾಧನವನ್ನು ಅಪೇಕ್ಷಿಸದು. ಆ ಕಾರಣದಿಂದ ಚಿದ್ರೂಪವೆಯಾಗಿಹುದು. ಪ್ರಪಂಚದ ಪ್ರತಿಯೊಂದು ಪದಾರ್ಥವು ತನ್ನ ಬಾಳುವೆಯನ್ನು ಆನಂದವೆಂದು ಅನುಭವಿಸುತ್ತಿಹುದು ಅಂತಹ ಬಾಳುವೆಗೆಲ್ಲ ತಾನೆ ಮೂಲಕಾರಣವಾಗಿರುವುದರಿಂದ ಆನಂದಸ್ವರೂಪವಾದವುದು. ತನ್ನೀಸ್ವರೂಪವನ್ನು ಆ ವಸ್ತುವು "ಅಸ್ಮಿ" ಪ್ರಕಾಶೇ "ನಂದಾಮಿ." ಎಂದು ಚೇತಿಸುತ್ತಿರುವುದು ಅದಕ್ಕೆಯೆ ವೀರಶೈವ ಶಾಸ್ತ್ರದಲ್ಲಿ ವಿಮರ್ಶವೆನ್ನುವುದು. ಅದೇ ಶಕ್ತಿಯು. ಈ ಶಕ್ತಿಯು ಇಲ್ಲವಾದರೆ ಶಿವನು ಜಡನೆನಿಸುವನು. ಲೋಕದಲ್ಲಿ ದರ್ಪಣಾದಿಗಳು ಸ್ವಚ್ಛವಾಗಿ ಹೊಳೆವುವು ಆದರೆ ಅವುಗಳಿಗೆ ತಮ್ಮಹೊಳಪಿನ ವಿಮರ್ಶವಿರುವುದಿಲ್ಲ. ಅದರಿಂದ ಅವು ಜಡವಾಗಿರುವವು ವಿಮರ್ಶವಿಲ್ಲದೆ ಪ್ರಕಾಶವಿರುವ ಪದಾರ್ಥವು ಚೇತನವೆನಿಸಲಾರದು.

ಹೀಗೆ ಚೇತನವಾದ ಪರಶಿವವಸ್ತುವು ಸ್ವಭಾವತಃ ಒಂದೆ ಯಾಗಿದೆ ಅದರ ಸ್ವರೂಪದಲ್ಲಿ ಕಾರ್ಯಕಾರಣಗಳೆಂಬ ಅಥವಾ ಅಂಶಾಂಶಿಗಳೆಂಬ ವಸ್ತುಭೇದವಿಲ್ಲ. ಆದರೆ ಆಪರವಸ್ತುವಿನಲ್ಲಿ ತಾದಾತ್ಮ್ಯದಿಂದಿರುವ ಶಕ್ತಿಯು ಅಂದರೆ ವಿಮರ್ಶವು ವಿಭಾಗ ಪರಾಮರ್ಶರೂಪವನ್ನು ಹೊಂದಬಲ್ಲುದು. ಈ ವಿಭಾಗ ಪರಾಮರ್ಶವು ವಸ್ತುತಃ ಭೇದವಿಲ್ಲದ ಒಂದೆ ಪದಾರ್ಥದಲ್ಲಿ ಒಡೆದು ವಿಭಾಗಮಾಡಿಸಬಲ್ಲುದು. ವಿಭಾಗವೆ ಭೇದವು. ಈ ಭೇದದಿಂದ ವಸ್ತುಸ್ವರೂಪಕ್ಕೆ ಹಾನಿಯೂ ಇಲ್ಲ. ಈ ರಹಸ್ಯ ವಿಷಯವನ್ನು ಒಂದು ಉದಾಹರಣದಿಂದ ಸ್ಪಷ್ಟೀಕರಿಸಬಹುದು. ಬಂಗಾರವದೆ. ಅದರಲ್ಲಿ ಕಡಗವು ತೋರುತ್ತದೆ. ಈ ಕಡಗವು ಬಂಗಾರದಿಂದ ಬೇರೆಯಲ್ಲ. ಕಡಗವಾದುದರಿಂದ ಬಂಗಾರದ ಸ್ವರೂಪಕ್ಕೆ ಹಾನಿಯಿಲ್ಲ. ಆದರು ಈ ಕಡಗವೆಂಬ ವಿಭಾಗವು ಒಡೆದು ತೋರಿಯೆ ತೋರುವುದು. ವಸ್ತುಸ್ವರೂಪ ಪರಿಚಯವುಳ್ಳ ಜ್ಞಾನಿಯು ಮಾತ್ರ ಬಂಗಾರದ ಹೊರತು ವಸ್ತ್ವಂತರವಿಲ್ಲೆಂದೂ ಕಡಗದ ತೋರಿಕೆಯಿಂದ ಬಂಗಾರಕ್ಕೇನೂ ವಿಕಾರವಿಲ್ಲೆಂದೂ ಗುರುತಿಸುವನು

ಅದರಂತೆಯೆ ಶಿವನು ತನ್ನ ವಿಮರ್ಶಶಕ್ತಿಯ ಮಹಿಮೆಯಿಂದ ಈ ಜಗತ್ತನ್ನು ಪ್ರಕಟಿಸುವನು. ಶಿವನಲ್ಲಿ ಪ್ರಕಟವಾದ ಜಗತ್ತು ಶಿವನಿಂದ ನ್ಯವಲ್ಲ. ಅದು ಭಿನ್ನವಾಗಿ ತೋರುವುದೆ ಮಾಯಿಕ ಪ್ರಪಂಚವು. ಅಭಿನ್ನವಾಗಿ ಚಿನ್ನದಲ್ಲಿ ಕಡಗವು ತೋರಿದಂತೆ ತೋರುವುದೆ ಸುಜ್ಞಾನವು.

CC-0. Jangamwadi Math Collection. Digitized by eGangotri

ಶಾಂಕರಾದ್ವೈತದಲ್ಲಿ ಚಿನ್ನ ಕಡಗದ ದೃಷ್ಟಾಂತವು ಹಲವು ಕಡೆಯಲ್ಲಿ ಬ
ರುತ್ತದಾದರು ಅದಕ್ಕೆ ರಜ್ಜುಸರ್ಪನ್ಯಾಯವೆ ಸಮ್ಮತವು. ವೀರಶೈವಸಿ
ದ್ಧಾಂತದಲ್ಲಿ ರಜ್ಜುಸರ್ಪದೃಷ್ಟಾಂತವು ಉಪಲಭಿಸುವದಾದರು ಸುವರ್ಣ
ಕುಂಡಲನ್ಯಾಯವೆ ಗ್ರಾಹ್ಯವು. ಶಾಂಕರ ಮತದಲ್ಲಿ ಜಗತ್ತು ಮಿಥ್ಯವಾದು
ದೆಂಬ ಮತವು. ವೀರಶೈವದಲ್ಲಿ ಅದು ಮಿಥ್ಯೆಯಲ್ಲ ಆದರೆ ಶಿವನಿಂದ ಎಂ
ದಿಗೂ ಬೇರೆಯಾಗಿರದೆಂಬ ಸಿದ್ಧಾಂತವು.

ಜಗತ್ತು ಶಿವನ ವಿಮರ್ಶಶಕ್ತಿಯಿಂದಲೆ ತೋರಬಲ್ಲುದು. ವಿಮರ್ಶಶ
ಕ್ತಿಯೆಂದರೆ ಸ್ವಾತ್ಮಸಂವಿವೆಂಬರ್ಥ. ತೋರಿದ ಜಗತ್ತನ್ನು ಶಿವನೆ ಅರಿಯಬಲ್ಲ
ನು. ಶಿವನಿಂದಲೆ ಜಗತ್ತಿನ ಸಿದ್ಧಿಯು. ಜಗತ್ತನ್ನೆಲ್ಲ ಸುವರ್ಣದಲ್ಲಿ ಪರ್ಯವ
ಸಾನಹೊಂದುವ ಕುಂಡಲದಂತೆ ಅಭೇದದಲ್ಲಿ ಮುಗಿಯುವ ಭೇದವುಳ್ಳ
ದೆಂದು ಅನುಸಂಧಾನ ಮಾಡುವುದೆ ಲಿಂಗತತ್ತ್ವವು. ಅಂದರೆ ಈ ವಿಶ್ವ
ದಲ್ಲಿ ಹಲವು ಪದಾರ್ಥಗಳು ಕಂಡರು ಆಪದಾರ್ಥಗಳೆಲ್ಲ ಪರಶಿವನಲ್ಲಿ ಅಭಿ
ನ್ನವಾಗಿವೆಯೆಂದು ಶಿವಸ್ವರೂಪವನಲ್ಲದೆ ಬೇರೆಯದನ್ನೇನು ಅದರಿಂದ
ಭಿನ್ನವಾಗಿ ಕಾಣದಿರುವೆ ಲಿಂಗತತ್ತ್ವವು ಲಿ ಗತೌ ಎಂಬುದರಿಂದ ಬಂ
ದ ಲಿಂಗವೆಂದರೆ ಸರ್ವವನ್ನೂ ವ್ಯಾಪಿಸಿ ಗರ್ಭೀಕರಿಸಿದುದೆಂಬರ್ಥ. ಸಾಗರ
ವೂ ಅದರಲ್ಲಿಯ ತರಂಗಗಳೆಂಬ ದೊಡ್ಡತೆರೆಗಳೂ ಭಂಗಿಗಳೆಂಬ ಸಣ್ಣತೆ
ರೆಗಳೂ ವಸ್ತುತಃ ಏಕರೂಪವಾದುದೆ ಅಭೇದ ಪರ್ಯವಸಾಯಿ ಭೇದಕ್ಕೆ ಉ
ದಾಹರಣವಾಗಿದೆ. ಸಾಗರವು ಇವೆಲ್ಲನ್ನು ಗರ್ಭೀಕರಿಸಿ ಒಳಕೊಂಡಿದೆ.

ಶಿವನಲ್ಲಿಯ ಚಿಚ್ಛಕ್ತಿಯು ಅಥವಾ ವಿಮರ್ಶಶಕ್ತಿಯು ನ್ಯೂನಭಾವ
ವನ್ನು ಹೊಂದಲಿಕ್ಕೆ ಸಾಮರ್ಥ್ಯವುಳ್ಳದಾಗಿದೆ. ಈ ನ್ಯೂನವಾದ ಚಿಚ್ಛ
ಕ್ತಿಯು ಶಿವನನ್ನು ಅಂಗನನ್ನಾಗಿ ಮಾಡಿತು. ಅಂಗಶಬ್ದವು ಅಗಿ ಗತೌ
ಎಂಬ ಗತ್ಯರ್ಥಕ ಧಾತುವಿನಿಂದ ಹುಟ್ಟಿದೆ ಅದರರ್ಥವು ಅಗ್ನಿಯಿಂದ ತೋ
ರುವ ಕಿಡಿಯಂತೆ ಲಿಂಗದಿಂದ ಬಂದುದೆಂತಲೂ, ಕೊನೆಯಲ್ಲಿ ಸಮುದ್ರ
ದಲ್ಲಿಯೆ ಲಯವಾಗುವ ನದಿಯಂತೆ ಲಿಂಗದಲ್ಲಿಯೆ ಲಯವಾಗುವುದೆಂದೂ
ಆಗುತ್ತದೆ. ಚಿಚ್ಛಕ್ತಿಯ ನ್ಯೂನೀಭಾವದಿಂದ ಅಂಗವಾದುದರಿಂದ ಅಂಗ
ತತ್ತ್ವವು ನ್ಯೂನವಾದ ಭೇದವನ್ನು ಮುಖ್ಯವಾಗಿ ಪರಾಮರ್ಶಿಸುವದು—
ಅಂದರೆ ವಿಶ್ವದಲ್ಲಿ ತೋರುವ ಬೇರೆ ಬೇರೆ ಭಾವಗಳನ್ನು ಅಥವಾ ಪದಾ
ರ್ಥಗಳನ್ನು ತಿಳಿವುದು. ಆದರೆ ಆಚಿಚ್ಛಕ್ತಿಯು ನ್ಯೂನವಾದರೂ ಶುದ್ಧವಿ
ರುವುದರಿಂದ ಭೇದವು ಆ ವಿಭಾಗದಿಂದದೆಯಲ್ಲದೆ ಪದಾರ್ಥಗಳ ಮೂಲ
ವಸ್ತುವಿನಲ್ಲಿ ಭೇದವಿಲ್ಲ ಮತ್ತು ವಿಚಾರತಃ ಪದಾರ್ಥಗಳು ಮೂಲವಸ್ತು

CC-0. Jangamwadi Math Collection. Digitized by eGangotri

ವಿನಿಂದನ್ಯವಲ್ಲ. ಎಂಬ ಸ್ಫುರಣವು ದೃಢವಿರುತ್ತದೆ. ಈ ಅಂಗನಿಗೆ ಚಿಚ್ಛಕ್ತಿಯೆ ಭಕ್ತಿಯೂ, ಅಂತಃಕರಣವೂ, ಜ್ಞಾನೇಂದ್ರಿಯಗಳೂ ಶಬ್ದಾದಿ ಪದಾರ್ಥಗಳೂ, ಆ ಶಬ್ದಾದಿವಾಚಕವಾದ ಷಡಕ್ಷರಗಳೂ ವಾಗಾದಿ ಕರ್ಮೇಂದ್ರಿಯಗಳೂ, ಆಗುತ್ತದೆ. ತಿಳಿದು ನೋಡಿದರೆ ಸರ್ವ ವ್ಯವಹಾರಗಳಲ್ಲಿಯೂ, ಆ ವ್ಯವಹಾರ ಗಳಿಗೆ ಸಾಧನೀಭೂತವಾದ ಅಂತರ್ಬಹಿರಿಂದ್ರಿಯಗಳಿಗೂ ಚಿಚ್ಛಕ್ತಿಯೆ ಮೂಲವಾಗಿ ಅವೆಲ್ಲ ಚಿಚ್ಛಕ್ತಿರೂಪವೆಯಾಗಿವೆ.

ಲಿಂಗಾಂಗತತ್ತ್ವಗಳ ಸ್ವರೂಪದ ಅಲ್ಪ ವಿವರಣವಿದು. ಸುವರ್ಣದರಿವನ್ನು ಮುಖ್ಯವಾಗಿಟ್ಟು ಕಟಕಾದಿಗಳನ್ನು ಅದರಿಂದನ್ಯವಲ್ಲದೆ ಸಾಕ್ಷಾತ್ಕರಿಪುದೆ ಲಿಂಗತತ್ತ್ವವು. ಕಟಕಾದಿಗಳದ್ನು ಕಂಡು ಅವುಗಳೆಲ್ಲ ಸುವರ್ಣದಿಂದ ವಿಭಾಗವಾಗಿವೆ ಅಂದರೆ ಒಡೆದು ತೋರಿವೆ ಎಂದನುಭವವುಳ್ಳದೆ ಅಂಗತತ್ತ್ವವು. ಆದುದರಿಂದ ಅಂಗಲಿಂಗತತ್ತ್ವಗಳಿಗೆ ಭೇದವಿಲ್ಲ. ಚಿಚ್ಛಕ್ತಿಯೆ ಅಂತಃಕರಣೇಂದ್ರಿಯಪದಾರ್ಥಾದಿಯಾಗಿ ಅಂಗನಿಗೆ ಉಪಕರಣವೆನಿಸಿದರಿಂದ ತೋರುವ ಸೃಷ್ಟಿಯೆ ಊರ್ಧ್ವ ಸೃಷ್ಟಿಯು.

ಈ ಶುದ್ಧತ್ವವಿಲ್ಲದೆ ಸ್ವರೂಪ ವಿಸ್ಮೃತಿಯೆಂಬ ಮಲವೂ ತನಗನ್ಯವಾಗಿ ಜಗತ್ತು ತೋರುವದೆಂಬ ಮಾಯೆಯೂ ಮಲಮಾಯಗಳಿಂದ ಮೋಹಿತವಾಗಿ ಫಲಗಳನ್ನು ಬಯಸಿ ಮಾಡುವ ಪುಣ್ಯಪಾಪಮಯವಾದ ಕರ್ಮವೂ ಉಳ್ಳ ಚೇತನವೆ ಜೀವವು. ಇಂತಹ ಜೀವನಸುಖದುಃಖಹೇತುವಾದ ಸೃಷ್ಟಿಯೆ ಅಧಃ ಸೃಷ್ಟಿಯು-ಊರ್ಧ್ವಸೃಷ್ಟಿಯೆ ಶಿವಸೃಷ್ಟಿಯೆನಿಸುವುದು ಅಧಃ ಸೃಷ್ಟಿಯೆ ಬ್ರಹ್ಮಸೃಷ್ಟಿಯು.

ಆದುದರಿಂದ ಪದಾರ್ಥಗಳಲ್ಲಿ ವಿಭಾಗಪೂರ್ವಕವಾದ ಭೇದವನ್ನು ಸಾಕ್ಷಾತ್ಕರಿಸಿ ವಿಶ್ವಕಾರಣವಾದ ಪರವಸ್ತುವನ್ನು ಅಭೇದಮಯವಾಗುದೆಂದು ಸಾಕ್ಷಾತ್ಕರಿಸುವದೇ ಶಿವಸೃಷ್ಟಿಯು, ಭೇದವೆ ಪರಮಾರ್ಥವೆಂದು ತಿಳಿವುದೇ ಮಾಯಾಸೃಷ್ಟಿಯು.

ಶಿವಸೃಷ್ಟಿಯಲ್ಲಿ ಅಹಂಕಾರವಿಲ್ಲ. ಅಹಂಕಾರವೆಂದರೆ ಸತ್ವರಜಸ್ತಮೋಗುಣಾತ್ಮಕವಾದ ಪ್ರಕೃತಿಯಲ್ಲಿ ತೋರಿದ ಒಂದು ವಿಕಾರವು. ಊರ್ಧ್ವಸೃಷ್ಟಿಯನ್ನು ವಿವರಿಸಿದೆವು. ಅಧಃ ಸೃಷ್ಟಿಯ ಸ್ವರೂಪವನ್ನು ಸ್ವಲ್ಪಹೇಳಿದೆವು. ಅಧಃ ಸೃಷ್ಟಿಯಲ್ಲಿ ಅಹಂಕಾರವು ಹೇಗೆಹುಟ್ಟಿತ್ತದೆಂಬುದನ್ನು ವಿಚಾರಿಸುವ. ಪರಮೇಶನ ವಿಮರ್ಶಶಕ್ತಿಯು ಸಚ್ಚಿದಾನಂದೇಚ್ಛಾಜ್ಞಾನಕ್ರಿಯಾಮಯವಾಗಿದೆ. ಆದರೆ ಸ್ವತಂತ್ರತೆಯಿಂದ ಜ್ಞಾನಕ್ರಿಯಗಳಲ್ಲಿ ಪರಸ್ಪರ ಭೇ

CC-0. Jangamwadi Math Collection. Digitized by eGangotri

ದವನ್ನು ತೋರಿಸಬಲ್ಲುದು. ತುಪ್ಪವುಹೇಗೆ ಒಂದಂಶದಲ್ಲಿ ಗಟ್ಟಿಯಾಗಬಲ್ಲು ದೊ ಮತ್ತು ಅದರಿಂದ ಸ್ವಾಭಾವಿಕ ರಸತ್ವಕ್ಕೆ ಹಾನಿ ಇಲ್ಲದಿದ್ದರು ತೋರಿಕೆಯ ಲ್ಲಿ ಪ್ರವಾಹಿತ್ವವು ಇಲ್ಲದಂತಾಗುವದೊ ಆದರಂತೆ, ತುಪ್ಪವೂಪ್ರವಾಹಿತ್ವವೂ ಕೂಡಿದ್ದಂತಿರುವ ಜ್ಞಾನಕ್ರಿಯುಗಳಲ್ಲಿ ಜ್ಞಾನವು ಕ್ರಿಯೆಯಲ್ಲ ಎಂಬ ಬುದ್ಧಿ ಯು ಉಂಟಾಗುವುದು. ಮತ್ತು ಕ್ರಿಯೆಯು ಜ್ಞಾನವಲ್ಲೆಂದುತೋರುವ ದು. ಜ್ಞಾತೃತೆಯು ಕತೃತಾರೂಪವಾಗಿದ್ದರೂ ಕರ್ತೃತಾರೂಪವಲ್ಲೆಂದು ಭಾಸಿಸುವುದು ಕರ್ತೃತ್ವವು ಜ್ಞಾತೃತಾರೂಪವಿದ್ದರು ಜ್ಞಾತೃತಾರೂಪವಲ್ಲೆಂದು ತೋರುವುದು ಆತ್ಮನ ಜ್ಞಾತೃತ್ವ ಕರ್ತೃತ್ವಗಳು ಉತ್ತಮ ಜ್ಞಾತೃತಾಕರ್ತೃತೆ ಗಳೆನಿಸುವವು. ವ್ಯಾಕರಣದ ವಿಚಾರದಿಂದ ಈ ವಿಷಯವು ತಿಳಿವುದು. ಆವುದೊಂದು ಕ್ರಿಯೆಯು ತನ್ನಿಂದಾ ಯಿತ್ತೆಂದು ಮಾತಾಡುವವನು ಹೇ ಳುವವಾಕ್ಯದ ಕ್ರಿಯಾಪದವು ಉತ್ತಮಪುರುಷದಲ್ಲಿರುವುದು. ಉದಾಹರ ಣೆ ನಾನು ಮಾಡುತ್ತೇನೆ ಮಾಡಿದೆನು. ಮಾಡುವೆನು ಎಂಬ ಕ್ರಿಯಾಪ ದಗಳು ಉತ್ತಮ ಪುರುಷದಲ್ಲಿವೆ. ತಾನು ಜ್ಞಾತೃಕರ್ತೃಸ್ವಭಾವ ನಾಗಿದ್ದರು ಜ್ಞಾತೃಸ್ವಭಾವನು ಕರ್ತೃಸ್ವಭಾವನಲ್ಲ. ಕರ್ತೃಸ್ವಭಾವನು ಜ್ಞಾತೃಸ್ವಭಾವನಲ್ಲ ಎಂಬುವುಗಳು ಮೊದಲನೆಯದು ಉತ್ತಮ ಕರ್ತೃತಾ ವಿನಿರ್ಮುಕ್ತ ಜ್ಞಾತೃತ್ವವೆಂತಲೂ. ಎರಡನೆಯದು ಉತ್ತಮ ಜ್ಞಾತೃತಾ ವಿನಿರ್ಮುಕ್ತ ಕರ್ತೃತ್ವವೆಂತಲೂ ಅನಿಸಿಕೊಳ್ಳುವುವು. ಉತ್ತಮ ಕರ್ತೃ ತಾವಿನಿರ್ಮುಕ್ತ ಜ್ಞಾತೃತ್ವದಿಂದಸತ್ವಗುಣವೆಂಬ ವಿದ್ಯಾಶಕ್ತಿಯು ಹುಟ್ಟಿತು. ಉತ್ತಮ ಜ್ಞಾತೃತಾ ವಿನಿರ್ಮುಕ್ತ ಕ್ರಿಯಾಶಕ್ತಿಯಿಂದ ರಜೋಗುಣ ವಾಯಿತು. ಜ್ಞಾನವು ಕ್ರಿಯೆಯಲ್ಲ ಕ್ರಿಯೆಯುಜ್ಞಾನವಲ್ಲವೆಂಬ ಪರಸ್ಪರ ವಿಯೋಗವೆ ತಮೋಗುಣವೆನಿಸಿತ್ತು. ಈ ಸತ್ವರಜಸ್ತಮೋಗುಣಗಳೆ ಸ ಮಾನ ಸ್ಥಿತಿಯಲ್ಲಿರಲು ಆದೇಪ್ರಕೃತಿಯು. ಈ ಪ್ರಕೃತಿಯು ಮೇಲೆ ಹೇಳಿದ ರೀತಿಯಿಂದ ಪರಮೇಶ್ವರನ ವಿಮರ್ಶಶಕ್ತಿಯ ಸ್ವಾತಂತ್ರ್ಯದಿಂದ ಕಲ್ಪಿತ ವಾಗಿದೆ ಪ್ರಕೃತಿಗೆ ಪ್ರಧಾನವೆಂತಲು ಹೆಸರುಂಟು. ಈ ಪ್ರಧಾನವೆ ಅಧಿ ಸೃಷ್ಟಿಗೆ ಬೀಜವಾಗಿದೆ. ಪ್ರಧಾನವು ಬೀಜವು ಮೊಳಿಕೆಗೆ ನೊದಲು ಉಬ್ಬು ವಂತೆ ಕಾರ್ಯಮುಖವಾದುದೆ ಮಹತ್ತತ್ವ ವೆನಿಸುವುದು. ಆ ಮಹತ್ತ ತ್ವದಿಂದ ಅಹಂಕಾರವು ಉತ್ಪನ್ನವಾಗುವದು. ಅಹಂಕಾರದಿಂದ ಮನ, ಬುದ್ಧೀಂದ್ರಿಯ ಕರ್ಮೇಂದ್ರಿಯ ತನ್ಮಾತ್ರಾ ಭೂತಗಳು ಹುಟ್ಟುವುವು. ಅಹಂಕಾರದಿಂದ ಆತ್ಮನು ಸುಖದುಃಖಭೋಗಕ್ಕೀಡಾಗುವನು. ನೋಡು. "ಸ್ಯಾತ್ರಿ ವಿಭೋಹಂಕಾರೋ ಜೀವನ ಸಂರಂಭಗರ್ವರೂಪೋಯಂ॥ ಸ॰ ಭೆದಾದಸ್ಯ ಸತೋ ವಿಷಯೋಽಮ್ನವಹಾರ್ಯ ತಾಮೇತಿ ॥ ತತ್ವಪ್ರಕಾ ಶಿಕಾ.

CC-0. Jangamwadi Math Collection. Digitized by eGangotri

ಚಿಚ್ಛಕ್ತಿ ಅಥವಾ ಶಿವವಿಮರ್ಶವೆಂಬ ಶುದ್ಧವಿದ್ಯೆಯೆ ಅಂತಃಕರಣೇಂದ್ರಿಯಾದಿಗಳಾದಾತನೆ ಅಂಗನು-ಪ್ರಕೃತಿ-ಅಥವಾ ಮಾಯೆಯಿಂದಾದ ಅಂತಃಕರಣೇಂದ್ರಿಯಾದಿಗಳುಳ್ಳಾತನು ಜೀವನು. ಮಾಯೆಯು ಶಿವನ ವಿಮರ್ಶಶಕ್ತಿಯ ವಿಲಾಸದಿಂದ ತೋರಿದುದರಿಂದ ಶಿವದೀಕ್ಷೆಯು ಮಾಯೆಯನ್ನು ಕಳೆದು ಜೀವನ ದೇಹೇಂದ್ರಿಯಗಳನ್ನು ವಿಮರ್ಶಮಯವಾಗಿ ಮಾಡಬಲ್ಲುದು. ಇಂತಪ್ಪ ಜೀವನು ಅಂಗಸ್ವರೂಪನಹನು. ಆಂದರೆ ಗುರು ಕರದಿಂದ ಊರ್ಧ್ವಸೃಷ್ಟಿಯಲ್ಲಿ ಕೂಡುವನು. ಇದನ್ನು ಯೋಗಜಾಗಮವು"ಗುರುಸಂಸ್ಕೃತಭಾವಃಸನ್ ಗುರುನಿರ್ಮಿತದೇಹವಾನ್| ವಿಸ್ಮೃತ್ಯ ಪೂರ್ವದುರ್ಭಾವಂ ತದಧೀನಃ ಸಮಾಚರೇತ್ ॥"
ಎಂದು ಹೇಳುತ್ತಿದೆ.

ಊರ್ಧ್ವಸೃಷ್ಟಿಯಲ್ಲಿ ಆಡುವ ಅಂಗನಿಗೆ ಕಾಣುವ ಭೇದವೆಲ್ಲ ವಿಭಾಗ ನಿಬಂಧವೆಂದಾಗುವುದರಿಂದ ಭೂತ ಭೌತಿಕಗಳೂ, ಕಾಲವೂ, ನಿಯತಿಯೂ ( ಸೃಷ್ಟಿಯಲ್ಲಿ ಇಂತಿಂತಹ ಕಾರ್ಯಗಳಿಂತಿಂತು ಆಗಲಿಕ್ಕೆಯೆ ಬೇಕೆಂಬ ನಿಯಮವು )  ಪ್ರಾಕೃತರನ್ನು ಬಾಧೆಬಡಿಸುವಂತೆ ಬಾಧಿಸಲಾರವು. "ದ್ವಿತೀಯಾದ್ವೈ ಭಯಂ ಭವತಿ" ಎಂಬ ಶ್ರುತಿಯಿಂದ ಅನ್ಯಕಲ್ಪನವೂ ಅನ್ಯಕಲ್ಪನದಿಂದಾದ ಭೇದವೂ ಭಯಹೇತುವಾಗಿದೆ. ಅನ್ಯಕಲ್ಪನವಿಲ್ಲದೆ ವ್ಯವಹಾರವಾಗದೆಂಬುದು ಯುಕ್ತವಲ್ಲ. ವ್ಯವಹಾರಕ್ಕೆ ಭೇದವು ಸಾಕು. ಆ ಭೇದವು ಅನ್ಯಕಲ್ಪನದಿಂದಾಗಿರಬೇಕೆಂದು ಆಗತ್ಯವಲ್ಲ. ಅನ್ಯ ಕಲ್ಪನವೆ ಬೇಕೆಂದರೆ ಈಶ್ವರನಲ್ಲಿ ಅನ್ಯಕಲ್ಪನವಿಲ್ಲದರಿಂದ ಸೃಷ್ಟಿ ಸ್ಥಿತಿ ಸಂಹಾರ ಲೀಲಾವ್ಯವಹಾರ ವಾಗಬಾರದಾಗುವುದು. ಕಡಗವು ಬಂಗಾರದಿಂದ ಅನ್ಯವಲ್ಲೆಂದು ತಿಳಿದರು ಬಂಗಾರವೆಂತಲೂ ಕಡಗವೆಂತಲೂ ವ್ಯವಹರಿಸಲಿಕ್ಕೆ ತೊಂದರೆಯಿಲ್ಲ. ಈ ಬಗೆಯ ವ್ಯವಹಾರದಲ್ಲಿ ಆತ್ಮನನ್ನು ಖಂಡಿಸುವ ಅಹಂಕಾರವಿಲ್ಲ. ಆತ್ಮನು ಸ್ವವಿಮರ್ಶದಲ್ಲಿಯೆ "ನಾನು" "ಇದು" ಎಂಬೆರಡನ್ನೂ ಕಂಡು ಅಹಮಿನಿಂದಲೂ ಇದಮಿನಿಂದಲೂ ಬದ್ಧನಲ್ಲ.

ಸಂಸಾರದುಃಖಕಾರಣವಾದ ಅಹಂಕಾರವಿಲ್ಲದರಿಂದ ನಿರಹಂಕಾರನಿಗೆ ಸುಜ್ಞಾನಿಯೆಂಬ ಹೆಂಡತಿಯಿದ್ದಳು. ಅಹಂಕಾರದೊಡನೆ ಅಜ್ಞಾನವಿರುವಂತೆ ಬಾಹ್ಯದಲ್ಲಿ ಸರ್ವಗೃಹಕೃತ್ಯಗಳನ್ನಭಿಮಾನಿಸುವ ಪತಿಗೆ ಆ ಅಭಿಮಾನಗಳನ್ನು ಪುಷ್ಟಿಗೊಳಿಸುವ ಪತ್ನಿಯಿರುವಳು. ಆದರೆ ನಂಮ ನಿರಹಂಕಾರನು ಊರ್ಧ್ವಸೃಷ್ಟಿಯವನಾದುದರಿಂದ ಅವನ ಹೆಂಡತಿಯು ಅಂತರಂಗದ ಸುಜ್ಞಾನ [illegible]

CC-0. Jangamwadi Math Collection. Digitized by eGangotri

ಶ್ರೀಪ್ರಭುಲಿಂಗಲೀಲಾಕಾರನು ನಿರಹಂಕಾರಸುಜ್ಞಾನಂಮಗಳಿಗೆ ಪ್ರಭುವು ಅಯೋನಿಜನಾಗಿ ಜನಿಸಿದ ಪರಿಯನ್ನು ವಿಸ್ತರಿಸಿರುವನು.

ದಾನವಿಲ್ಲದ ಧರ್ಮ ವಿಷಯ । ಧ್ಯಾನವಿಲ್ಲದ ತಪಸ್ಸು ಜೀವಸ್ಥಾನದ ನುಸಂ । ಧಾನವಿಲ್ಲದ ಯೋಗಪಭ್ಯಾಸ ॥ ಜ್ಞಾನವಿಲ್ಲದ ಸಿದ್ಧ ವರಸಂ । ತಾನವಿಲ್ಲದ ಬಾಳ್ಕೆಯಲಿ ಸುಖವೇನು ದೊರಕುವದೆನುತ ನಿರಹಂಕಾರ ಚಿಂತಿಸಿದ ॥ ಲೌಕಿಕರು ಕಾಮಿಸುವರಿಹಪರ । ಲೋಕವನು ತವಗೀವ ಪುತ್ರನ । ನೇಕೆಯಾ ಮಾಯಾಪ್ರಪಂಚಿನ ಘಳಿಕೆಗಳು ನಮಗೆ ॥ ಏಕಪೆನಿಸುವ ನಿಜವನೀವನಿ । ರಾಕುಳದ ಸುಕುಮಾರನಾಗಲಿ । ಬೇಕುನಮಗೆಂದೆನುತ ನಿರಹಂಕಾರನಿಂತೆಂದ ॥

ಹೀಗೆ ಲೋಕದವನಲ್ಲದ ಪುತ್ರನನ್ನು ಬಯಸಿದ ನಿರಹಂಕಾರನು ಅಂತಹ ಪುತ್ರನು ಸ್ನಾನ ಜಪತಪನಿಯಮಗಳಿಂದ ದೊರಕನು. ಇವೆಲ್ಲ ಮಾಯಾಪ್ರಪಂಚವು ಇಂತೆಂದು, ನಿಶ್ಚಯಿಸಿ ಲಿಂಗಸಮಾಧಿಯಿಂದ ಆ ಲಿಂಗದ ಚೈತನ್ಯರೂಪವಾದ ಜಂಗಮವೆ ಪುತ್ರನಾಗುವನೆಂದು ನಿರ್ಣಯಿಸಿ ಆಸವಸಾಧಿಯನ್ನು ಮಾಡಬೇಕೆಂದು ನಿಶ್ಚಯಿಸಿದನು.

ಉಪಮಿಸಲು ಸಲೆ ಸಂಗ ಜಲದಲಿ । ಜಪದ ಜಂಜಡ ಜೋಕೆಯಲಿ ಮೇಣ್ । ತಪದ ತಾಮಸಭಾವದಲಿ ಮಾಯಾಪ್ರಪಂಚಿನಲಿ ॥ ವಿಪುಲ ವಿಮಲಜ್ಞಾನ ಕಲೆಯಲಿ ; ಚಪಳನಾದ ಕುಮಾರನಿಲ್ಲೆನು । ತಪರಿಮಿತ ದೆಣಿಕೆಗಳ ನಿರಹಂಕಾರ ಚಿಂತಿಸಿದ ॥

ಆದಡಂತಃ ಕರಣ ವೃತ್ತಿಯ । ಹಾದಿಯನು ಪಲ್ಲಟಿಸಿ ಮೆಲ್ಲನೆ । ನಾದಬಿಂದುಕಲಾ ಪ್ರಬಂಧದ ಬಲೆಗಳಿಂ ನುಸುಳಿ ॥ ಆದರಿಸಿ ಎನಗಚಲ ಪದವನು । ವೇದಿಸುವ ಸತ್ಪುತ್ರ ನೊಬ್ಬನ । ಸಾಧಿಸುವೆನೆಂದೆನುತ ನಿರಹಂಕಾರನಸುಗೆಯ್ದು ॥ ಸತಿಸಹಿತ ಸಂಕಲ್ಪಸಾಧನ । ಗತಿಯ ಮೇಳಾಪದಲಿನೆರೆನಿ । ಕ್ಷಿತವ ನಾಡಿ ಮನಸ್ಸನೇಕೀಭಾವ ನಿಸ್ಸೆಯಲಿ ॥ ಪ್ರತಿಇಡುವ ಪಂಚೇಂದ್ರಿಯಂಗಳ । ನತಿಗಳವನಂಪದನನ ಬಯಕೆಯ । ಪತಿಗಳಲಿ ಸುಜ್ಞಾನಿ ನಿರಹಂಕಾರ ರೊಪ್ಪಿದರು ॥ ಸಂತೆಯೊಳಗುಂಟೇ । ಸಮಾಧಿಯ । ಸಂತತಾನಂದದ ಸ ಖೋದಯ । ವೆಂತುದೊರಕುವದೆನುತ ಮಂದಿಯ ಕಳಕಳವ ತೊಲಗಿ । ಸಂತತಿಯ ಸಂಕಲ್ಪದಿಂದೇ । ಕಾಂತವಾಸವ ಹೊಕ್ಕು [illegible] ಸುಜ್ಞಾನಿ ನಿರಹಂಕಾರರೊಪ್ಪಿದರು ॥

CC-0. Jangamwadi Math Collection. Digitized by eGangotri

## ಲಿಂಗ ಸಮಾಧಿಯು.

ಅನುಗೊಳಿಸಲಳಪಟ್ಟಪದ್ಮಾ। ಸನದಹಸ್ತನ್ಯಸ್ತಲಿಂಗದ। ನೆನಹು ನೆರೆಕಠಿಗಟ್ಟಿದಂಗದ ನಟ್ಟದಿಟ್ಟಗಳ॥ ಮನದ ಮೇಳಗಳೊಳಗೆ ಸಿಕ್ಕದ। ಘನತರ ಪ್ರಾಣಾನಿಲನಸಾ। ಘನಸಮಾಧಿ ವಿಳಾಸದಲಿ ದಂಪತಿಗಳೊಪ್ಪಿದರು॥ ಹೂಳಿಹೋಯಿತ್ತಸ್ನ ಪಾನದ। ಮೇಲಣೆಚ್ಚೆಯ ನೇಕಪರಿಯಲಿ। ಹಾಳುಬಿಪ್ಪವು ಜಾಗ್ರಸ್ವಪ್ನಸುಷುಪ್ತಿಗಳ ಬಲುಹು॥ ಕೋಳುಹೋದುವು ಕರಣಗಳಕಾ। ಲಾಳು ಬೆಂಬಟ್ಟೆಯ ಸುಷುಮ್ನಾ। ನಾಳದಲಿ ದಂಪತಿಗಳನುಭವವಿರೆ ಸಮಾಧಿಯಲಿ॥

ಆಸಮಾಧಿಯ ಭಾವದಲಿನವ। ವಾಸಪೂರಿತವಾಗಿ ನೆನಹಿನ। ನೇಸರಿನ ಬಲು ಬಿಸಿಲು ಬೆಳಗಿಬುದಂತರಂಗಲಿ॥ ಲೇಸೆನಿಸಿ ಕಾಣಿಸಿದುದೊಯ್ಯನೆ। ಭಾಸುರಶ್ರೀಮೂರ್ತಿಯೊಂದುವಿ। ಳಾಸನಿರಹಂಕಾರ ಸುಜ್ಞಾನಿಗಳವುನದೊಳಗೆ॥ ಕಂಡರೇಕೋಭಾವದಲಿನಿಃ। ಖಂಡಮಹಿಮನ ನಿಖಿಳಭವಭಯ। ಖಂಡನನಸಾದ್ಯಂತರಹಿತನ ಪ್ರಮೇಯನನು॥ ಚಂಡಕರಕೋಟಿಪ್ರಕಾಶೋ। ಪ್ದಂಡಮಯನಸುಹೃನ್ಮನೋಂಬುಜ। ಮಂಡಿತನನಾದಂಪತಿಗಳೊಲಿದಂತರಂಗದಲಿ॥ ಕರಣಗಳು ಕಾಲಿಡಲು ನೇತ್ರದ। ಬಿರಿಮುಗುಳು ಬಿಚ್ಚಿದುವುನಾಡಿಯ। ಹೊರಳಿ ಹುರಿಗೊಳಿಸಿದವು ಚೇಷ್ಟಿಸಿ ಬಾಹಿರಂಗದಲಿ॥ ಅರಳಿದುದು ಮನದರಿಕೆ ಭೋಂಕನೆ। ಹೊರೆಯಲಿಹ ಬಾಲಕನ ಕಂಡರು। ಪರಮನಿರಹಂಕಾರ ಸುಜ್ಞಾನಿಗಳು ಹರುಷದಲಿ॥ ಬಿಸಿಲ ಬೇರಿಟ್ಟೆಳೆಗಿಳಿದುಶೋ। ಭಿಸುವಸೂರ್ಯನೊ ಹಿಮವನತಿಗಳೆ ದೆಸೆವಚಂದ್ರನೊ ನೆಟ್ಟನಾಶ್ರಿತಭಕ್ತಗುಣವಳಿದು॥ ಮಿಸುಗುವಗ್ನಿಯೊ ಪೇಳೆನಲುರಂ। ಜಿಸುವ ತೇಜೋಮಯದಬಾಲಕ। ನೆಸೆದನಾಸುಜ್ಞಾನಿನಿರಹಂಕಾರರೆದುರಿನಲಿ॥

ಹೊಗಳಿಹೋರುವ ವೇದಶಾಸ್ತ್ರದ। ಬಗೆಗೆಬಾರದಹರಿವಿರಿಂಚಾ। ದಿಗಳು ಸಾಧಿಸಿಕಾಣಲರಿಯದ ಪರಮ ಮುನಿನಿಕರ॥ ಮೊಗಸಿ ಮಾಡುವ ತಪಕೆ ಸಿಲುಕದ। ಸುಗುಣ ನಿರ್ಗುಣ ಮೂರ್ತಿಯಲ್ಲಮ ವಿಗಡಶಿಶುವನು ಕಂಡರಾದಂಪತಿಗಳರ್ತಿಯಲಿ॥ ಸುರರುಹೂಮಳೆಗರೆದರಾಗಲೆ। ನೆರೆದು ನುಡಿದುವು ದೇವದುಂದುಭಿ। ಪರಮ ಮುನಿಜನರಂತರಂಗದ ಲಾದುದುತ್ಸಾಹ॥ ಕೊರಡುಗಳು ಕೊನರಿದುವು ಕರೆಯದ। ಬರಡುಗಳು ಹಯನಾದವೆಂಮಯ ಗುರುಗೊಹೇಶ್ವರನಿಳೆಗೆ ಮೋಹಿಸಿ ಮೆರೆದ ಕತದಿಂದ॥ ಭಾಪು ಘನಗುರುಲಿಂಗಮೂರ್ತಿಯ। ಭಾಪುಜಂಗಮ ಲಿಂಗಮೂರ್ತಿಯೆ।

CC-0. Jangamwadi Math Collection. Digitized by eGangotri

ಭಾವುಶಿವಲಿಂಗ ಪ್ರಸಾದವ್ಯೋಮಮೂರುತಿಯೆ ॥ ಭಾವುರೇ ಎಂದೆನುತ ಲಾಚಿ। ದ್ರೂಪಶಿಶುವನು ಕಂಡುಹಿಗ್ಗಿದ। ನಾಪುರಾತನೆನಿಪ ನಿರಹಂಕಾರ ನರ್ತಿಯಲಿ ॥

ಈ ವಿಷಯುವನ್ನು ಸಂಸ್ಕೃತ ಪ್ರಭುಲಿಂಗಲೀಲಾಕಾರನಾದರು ಮಾರ್ಮಿಕವಾಗಿ ವರ್ಣಿಸಿರುವನು. ಅದನ್ನೆಲ್ಲ ಉದಾಹರಿಸದೆ ಕೇವಲ ಉದಯವರ್ಣನವನ್ನಷ್ಟೆ ಕೊಡುವೆನು—ಇತ್ಥಂತಯೋಃ ಪರಶಿವಾತ್ಮಜ ಕಾಂಕ್ಷಯೈವ। ಲೋಕೋತ್ತರ ವ್ರತಪರಾಯಣಯೋಸ್ತದಾಸೀಂ ॥ ಆರೂಢಯೋಗಪದಯೋಃ ಕರಪದ್ಮಸಂಸ್ಥ।ಲಿಂಗಪ್ರಭೈವಹೃದಯೇಸ್ಮೃಶನೀಬಭೂವ ॥ ಇತ್ಥ್ರತ್ರೇಕ್ಷಾ ವಿಷಯಮಭಿತಃ ಪ್ರಸ್ಫುರತ್ಸರ್ವತೇಜೋಜೇತೃ ಬ್ರಹ್ಮಾಭಿಧ ಮಭಿನವಂ ಶುದ್ಧತೇಜಃ ಸಮಗ್ರಂ ॥ ದಂಪತ್ಯೋರ್ಹೃತ್ಕಮಲಕುಹರೇ ಸದ್ಗುಣಂ ನಿರ್ಗುಣಂ ತತ್‌ಪ್ರಾದುರ್ಭೂತ್ವಾಸ್ಫಟಿಕ ವಿಶದಂ ಸರ್ವಪೂರ್ಣತ್ವಮಾಪ್ತ್॥ ತದನುವಿಮಲತೇಜಸ್ತತ್ರಯೋರಗ್ರಭಾಗೇ ಬಹಿರಹಹಮಿಲಿತ್ವಾ ಪ್ರಸ್ಫುರದ್ವಿಗ್ರಹಂ ಸತ್। ಪೃಥಗಿವದದೃಶೇಸ್ಮ ಪ್ರಾಪ್ತನಿದ್ರಾಂತಭಾಜೋಃಸುತ ಇತಿ ಮತಿ ಮಾತ್ಮನ್ಯಾವಹದ್ವಿತ್ರ್ಯಮಾನಂ ॥

ಹೀಗೆ ಅವರಿಬ್ಬರು ಪರಶಿವನೆ ತಮಗೆ ಮಗನಾಗಬೇಕೆಂಬ ಅಭಿಲಾಷೆಯಿಂದ ಲೋಕೋತ್ತರವಾದ ವ್ರತವನ್ನಾಚರಿಸುತ್ತ ಯೋಗಪದಾರೂಢರಾಗಿರಲು ಕರಕಮಲದಲ್ಲಿರುವ ಇಷ್ಟಲಿಂಗಪ್ರಭೆಯೆ ಹೃದಯುವನ್ನಾವರಿಸಿನಿಬಿಡವಾಯ್ತೆ! ಎಂಬ ಉತ್ಪ್ರೇಕ್ಷೆಗೆ ವಿಷಯವಾದ, ಚಂದ್ರಸೂರ್ಯಾದಿ ಸರ್ವತೇಜಸ್ಸುಗಳನ್ನು ಧಿಕ್ಕರಿಸುವ, ಪರಬ್ರಹ್ಮವೆನಿಸಿದ ಶುದ್ಧತೇಜಸ್ಸಮಗ್ರವು (ತನ್ನಶಕ್ತಿಯಿಂದ) ಸಗುಣ ನಿರ್ಗುಣ ವೆನಿಸುವಂತಹದು, ಅವರೀರ್ವರ ಹೃದಯಕಮಲಕುಹರದಲ್ಲಿ ಪ್ರಾದುರ್ಭವಿಸಿತು. ಮತ್ತು ಹೊರಗೆ ಒಟ್ಟುಗೂಡಿತೇಜೋಮೂರ್ತಿಯಾಗಿ ಶಿವಯೋಗನಿದ್ರಾಜಾಗರಿತರಾದ ಅವರಿಬ್ಬರಿಗೆ ಇದು ತಂಮ ಶಿಶುವೆಂಬ ಬುದ್ಧಿಯನ್ನುಂಟುಮಾಡಿತು. ತದನಂತರದಲ್ಲಿ—ಉನ್ಮೀಲ್ಯ ಚಕ್ಷುರ್ನಿರಹಂಕ್ರಿಯಾಖ್ಯೋ ಮುನಿರ್ಗುಹೇಶಂಸುತಾಯಮಾನಂ। ಪೃಷ್ಟ್ವಾನಿಜಾಂತಃ ಪುನರಪ್ಯವೇಕ್ಷ್ಯ ವಿಭಾವಯಾಮಾಸ ತಯೋಸ್ತದೈಕ್ಯಂ ॥ ನಿರಹಂಕಾರನು ಕಣ್ದೆರದು ಮಗನಂತಾಚರಿಸುವ ಗುಹೇಶನನ್ನು (ಗುಹಾಹಿತಂ ಗಹ್ವರೇಷ್ಠಂ ಪುರಾಣವ್ ಎಂಬ ಕಾಠಕ ಶ್ರುತಿಯಿಂದ ಹೃದಯಗುಹಾಶಯನಾದ ಪರಮಾತ್ಮನನ್ನು) ಹೊರಗೆಕಂಡುಪುನಃ ತನ್ನ ಅಂತರಂಗವನ್ನು ನೋಡಿ ಒಳಗಿನ ಆ ಗುಹೇಶನೆಹೊರಗಾಡುವ ಶಿಶುವೆಂಬ ಗುರುತಿಸಿದನು.

CC-0. Jangamwadi Math Collection. Digitized by eGangotri

ಇಷ್ಟಲಿಂಗದ ತೇಜವೆ ಮೂರ್ತಿಯಾಗಿ ಶಿಶುವಿನೊತಾಚರಿಸಿತೆಂದು ಉಭಯ ಕವಿಗಳು ಹೇಳುವ ತಾತ್ಪರ್ಯವು ಇಷ್ಟಲಿಂಗವೆ ಜಂಗಮವಾದುದರಿಂದ ಪ್ರಭುಲಿಂಗವು ಸಕಲ ಅಷ್ಟಾವರಣಧರನಾಗಿದ್ದನೆಂದು ಇರುವುದು. ಅಷ್ಟಾವರಣಗಳು ಒಂದನ್ನೊಂದು ಬಿಟ್ಟಿಲ್ಲ. ತಂದೆತಾಯಿಗಳರೇತೋರಕ್ತ ಜನ್ಯವಾದ ಶರೀರದಲ್ಲಿ ಭೌತಿಕ ಶರೀರಾವಯವಗಳು ಪ್ರಸಿದ್ಧವಾಗುವಂತೆ ಲಿಂಗತೇಜಃ ಪ್ರಾದುರ್ಭವವಾದ ಲಿಂಗಶರೀರಕ್ಕೆ ಲಿಂಗಾದಿ ಅಷ್ಟಾವರಣಗಳುಸಹಜವಾಗಿವೆ.

ಕನ್ನಡ ಪ್ರಭುಲಿಂಗ ಲೀಲಾಕಾರನಾದ ಚಾಮರಸನಂತು ಅಲ್ಲಮನ ಇಷ್ಟಲಿಂಗಮಹತ್ವವನ್ನು ನಿರಹಂಕಾರನುಮಾಡಿದ ಪ್ರಭುವಿನ ಸ್ತುತಿಯಲ್ಲಿ ವ್ಯಕ್ತಗೊಳಿಸಿರುವನು "ಭಾಪು ಘನಗುರುಲಿಂಗ ಮೂರ್ತಿಯೆ। ಭಾಪು ಜಂಗಮ ಲಿಂಗಮೂರ್ತಿಯೆ । ಭಾಪು ಶಿವಲಿಂಗಪ್ರಸಾದವ್ಯೋಮ ಮೂರುತಿಯೇ ॥ ಭಾಪುರೇ ಎಂದೆನುತಲಾ ಚಿದ್ರೂಪಶಿಶುವನು ಕಂಡುಹಿಗ್ಗಿದ। ನಾಪುರಾತನನೆನಿಪ ನಿರಹಂಕಾರನರ್ತಿಯಲಿ ॥"

ಇಷ್ಟಲಿಂಗ ತೇಜೋರೂಪವೆಂದು ಸಂಸ್ಕೃತ ಲೀಲಾಕಾರನು ಸ್ತುತಿಸಿದರಿಂದ ಅಂಗದಮೇಲೆ ಇಷ್ಟಲಿಂಗವಿತ್ತೆಂದು ಹೇಗಾಯಿತೆಂಬ ಶಂಕೆಯು ಸಾಮಾನ್ಯವಾಗಿ ಬರಬಹುದು. ಈ ಶಂಕೆಗೆ ವೀರಶೈವಶಾಸ್ತ್ರದ ಅಪರಿಚಯುವೆ ಮೂಲವು. ಅಂಗಲಿಂಗವೆಂಬ ವಿಭಾಗನಿಬಂಧನ ಭೇದವನ್ನು ಹೊಂದುತ್ತಲೆ ಒಂದು ಲಿಂಗತತ್ತ್ವವು ಉಪಾಸ್ಯವಾಗಿಯೂ ಮತ್ತೊಂದು ಅಂಗತತ್ತ್ವವು ಉಪಾಸಕವಾಗಿಯೂ ಇರುವುವು. ಅಗಿಗತೌ ಎಂಬ ಧಾತುವಿನಿಂದಾಗಲಿ "ಅಮಿತಿ ಬ್ರಹ್ಮಸನ್ಮಾತ್ರಂಗಚ್ಛತೀತಿ ಗಮುಚ್ಯತೇ" ಎಂಬ ನಿರ್ವಚನದಿಂದಾಗಲಿ ಬ್ರಹ್ಮದಲ್ಲಿ ನಿತ್ಯಪ್ರಾಪ್ತಿಯನ್ನು ಅಥವಾ ಸಂಬಂಧನ್ನು ತಾಳಿದ ಅಂಗನು ಲಿಂಗದಿಂದ ಬೇರಿರಲಾರನು. ಲಿಗಿ ಚಿತ್ರೀಕರಣೇ ಎಂಬ ಧಾತುವಿನಿಂದಾಗಲಿ "ಲಿಕಾರೋ ಲಯ ಬುದ್ಧಿಸ್ಥೋ ಬಿಂದುನಾಸ್ಥಿತಿರುಚ್ಯತೇ। ಗಕಾರಾದ್ಗಮನ ಮಿತ್ಯುಕ್ತಂ ಲಿಂಗಂ ಸೃಷ್ಟ್ಯಾದಿ ಕಾರಣಂ" ಎಂಬ ನಿರ್ವಚನದಿಂದಾಗಲಿ ಆ ಅಂಗನ ಉಪಾಧಿಗಳಾದ ಮಾನಸಾದಿ ಕರಣಗಳಿಗೆ ಉತ್ಪತ್ತಿ ಸ್ಥಿತಿಲಯ ಕಾರಣವಾದ ಲಿಂಗವು ಅಂಗವನ್ನು ಬಿಟ್ಟಿರಲಾರದು. ಪ್ರಾಕೃತ ಮಾಯಾಮಯವಾದ ಜೀವನು ಮಾಯೆಯಲ್ಲಿ ಸಿಲುಕಿ ಶಿವನನ್ನು ಮರೆವನು. ಶಿವನಿಂದ ವಿಯುಕ್ತನಾಗಿರುವನು. ಆದುದರಿಂದ ಮಾಯಾಬದ್ಧನಾದ ಜೀವನು ಪೂರ್ವಕಾಂಡೋಕ್ತವಾದ ಯಜ್ಞಯಾಗಾದಿಗಳಿಂದ ನಿರ್ಮಲನಾಗಿ ಮಾಯಿಕವಾದ ಸಂಸಾರದಲ್ಲಿ ಹೇಯ ಬುದ್ಧಿಯನ್ನು ತಾಳಿ ಸದ್ಗುರುವಿನಲ್ಲಿ ಲಿಂಗಧಾರಣವನ್ನು ಹೊಂದಿ ಅಂಗರೂ

CC-0. Jangamwadi Math Collection. Digitized by eGangotri

ಪನಾಗಿ ಲಿಂಗದೊಡನೆ ಸಾಮರಸ್ಯವನ್ನು ಹೊಂದುವನು. ಲಿಂಗಾಂಗಗಳಿಗೆ ಸ್ವಾಭಾವಿಕವಾದ ನಿತ್ಯಸಂಯೋಗವನ್ನು ಶಿವಾದ್ವೈತ ಮಂಜರಿಯಲ್ಲಿ ನೋಡು—ಏವಂಚ ಲಿಂಗತತ್ತ್ವಸ್ಯ ಶರಣತತ್ತ್ವಮೇವಾಂಗಂ ಶರಣಸ್ಯ ಲಿಂಗಂ ಪ್ರಾಣಃ। ಅನಯೋರ್ಬೀಜ ವೃಕ್ಷನ್ಯಾಯೇನ ನಿತ್ಯ ಸಾಮರಸ್ಯಮೇವ। ಏವಮನಾದಿತಃ ಶರಣ ಏವ ಲಿಂಗಂ ಲಿಂಗಮೇವ ಶರಣ ಇತಿನೂನಂ।- ಮೇಲೆ ಉದಾಹರಿಸಿದ ರೀತಿಯಿಂದ ಲಿಂಗತತ್ತ್ವಕ್ಕೆ ಅಂಗತತ್ತ್ವವು ಶರೀರವು ಶರಣತತ್ತ್ವಕ್ಕೆ ಲಿಂಗತತ್ತ್ವವು ಪ್ರಾಣವು. ಇವೆರಡಕ್ಕೆ ಬೀಜ ವೃಕ್ಷ ನ್ಯಾಯದಿಂದ ಅನ್ಯೋನ್ಯ ಸಾಮರಸ್ಯವು. ಅಂದರೆ ಲಿಂಗದೊಡನೆ ಅಂಗದ ಸಾಮರಸ್ಯವು ಅಂಗದೊಡನೆ ಲಿಂಗದ ಸಾಮರಸ್ಯವು. ಕೇವಲ ಅಂಗದ ಸಾಮರಸ್ಯವು ಲಿಂಗದೊಳಗಲ್ಲ. ಉಭಯ ಸಾಮರಸ್ಯವು. ಹೀಗೆ ಅನಾದಿಯಿಂದಲು ಶರಣನೆ ಲಿಂಗವು. ಅಂಗವೇ ಶರಣನು.

ಮಾಯಿಕ ಜೀವನು ಅಂಗವಾಗಿ ಲಿಂಗವಾಗ ಬಲ್ಲನು. ಇನ್ನು ಮಾಯಿಕ ಜೀವನು ಅಂಗವಾಗುವ ಪರಿಯನ್ನು ಅಂಗದಲ್ಲಡಗಿ ಅಥವಾ ಅಂಗವಾಗಿ ಲಿಂಗವಾಗುವ ರಹಸ್ಯವನ್ನು ಅದೇ ಶಿವಾದ್ವೈತ ಮಂಜರಿಯಲ್ಲಿ ನೋಡು—"ಆತ್ರ ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಂ ಪ್ರಪದ್ಯತೇ" ಇತಿ ಭಗವದುಕ್ತೇಃ ಅನೇಕ ಜನ್ಮಾರ್ಜಿತ ಶಿವಪೂಜಾದಿ ಸತ್ಕರ್ಮ ಮಹಿಮ್ನಾ ಇಹಜನ್ಮನಿ ಗುರುಕಟಾಕ್ಷ ವಶಾದೇವಂವಿಧ ಷಟ್ಸ್ಥಲ:ಜ್ಞಾನಂ ಕಶ್ಚಿದೇವ ಲಬ್ಧ್ವಾಮುಕ್ತೋ ಭವತೀತಿ ನೂನಂ" ಈ ವಿಷಯದಲ್ಲಿ ಬಹಳ ಹುಟ್ಟುಗಳಾದ ಬಳಿಕ ಜ್ಞಾನವಂತನಾಗಿ ನನ್ನನ್ನು ಸಾರುವನು ಎಂದು ಭಗವದುಕ್ತಿಯು ಇರುವುದರಿಂದ ಅನೇಕ ಜನ್ಮಗಳಲ್ಲಿ ಸಂಪಾದಿಸಿದ ಶಿವಪೂಜೆ ಮೊದಲಾದ ಸತ್ಕರ್ಮಗಳ ಪ್ರಭಾವದಿಂದ ಈ ಜನ್ಮದಲ್ಲಿ ಶ್ರೀ ಗುರುಕರುಣಾಕಟಾಕ್ಷದಿಂದ ಆವನೊ ಒಬ್ಬನು ಇಂತಹ ಷಟ್ಸ್ಥಳದ ಜ್ಞಾನವನ್ನು ಪಡೆದು ಮುಕ್ತಿಯನ್ನು ಪಡೆವನೆಂಬುದು ನಿಜವು.

### ಅನಾದಿ ಜಂಗಮತತ್ತ್ವವು.

ಅನಾದಿಯಿರದ ಮಾಯಾಕೋಲಾಹಲನಾದ ಶ್ರೀಮದಲ್ಲಮನು ಸ್ವಾಭಾವಿಕ ಅಂಗಲಿಂಗಾತ್ಮಕಸಿದ್ಧನು. ಆದುದರಿಂದ ವೀರಶೈವಧರ್ಮನೆ ರೂಪುಗೊಂಡ ಅಲ್ಲಮನು ಅನಾದಿ ಜಂಗಮವೆನಿಸಿಕೊಂಬುವನು—ಈ ಜಂಗಮತತ್ತ್ವವು ವೀರಶೈವರಿಗೆ ಅತಿ ಪೂಜ್ಯವಾದುದು.

### ಅನಾದಿಭಕ್ತ ಜಂಗಮವಿವರ.

ಷಟ್ಸ್ಥಲಾತ್ಮಕವಾದ ಅಂಗಲಿಂಗ ರಹಸ್ಯದಲ್ಲಿ ಕ್ರಿಯಾಶಕ್ತಿಯು ಪ್ರಧಾನವಾಗಿ ವೈರಾಗ್ಯನಿರತನಾದಲ್ಲಿ ಭಕ್ತನಪ್ಪನು. ಜ್ಞಾನಪ್ರಧಾನವಾಗಿ

Jangamwadi Math Collection. Digitized by eGangotri

ವಿರತಿಪರನಾದಲ್ಲಿ ಜಂಗಮನಪ್ಪನು. ಭಕ್ತಜಂಗಮ ತತ್ತ್ವಗಳು ಈ ರೀತಿಯಾಗಿ ಏಕವಾಗಿವೆಯಾದರು ಭಕ್ತನು ಪೂಜಕನಾಗಿ ಅಂಗತತ್ತ್ವದಲ್ಲಿಯೂ ಜಂಗಮನು ಪೂಜ್ಯವಾಗಿ ಲಿಂಗತತ್ತ್ವದಲ್ಲಿಯೂ ವ್ಯವಹರಿಸುವನು. ಆದರೆ ಮೇಲೆಹೇಳಿದ ಲಿಂಗಾಂಗಗಳ ಸಾಮರಸ್ಯವು ನಿತ್ಯವಾದುದರಿಂದ ಭಕ್ತನಲ್ಲಿ ಲಿಂಗತತ್ತ್ವವೂ ಜಂಗಮನಲ್ಲಿ ಅಂಗತತ್ತ್ವವೂ ಸಮರಸಭಾವದಿಂದ ಇಪ್ಪೇರೀತಿರತಕ್ಕದು. ಭಕ್ತಜಂಗಮ ಭೇದವು ಜಾತಿಯಿಂದಾದುದಲ್ಲ. ವೀರಶೈವದಲ್ಲಿ ಜಾತಿಗಳಿಲ್ಲ. ಆದರೆ ಆಯಾ ಆತ್ಮನ ಭಕ್ತಿಜ್ಞಾನಗಳ ಗುಣಪ್ರಧಾನ ಭಾವದಿಂದಾಗತಕ್ಕದು. ಭಕ್ತನಾಗಲಿ ಜಂಗಮನಾಗಲಿ ಇಬ್ಬರು ಮುಕ್ತರೆ.

## ಪ್ರಭುಜನ್ಮಸಮರ್ಥನ.

ಅನಾದಿ ಜಂಗಮನಾದ ಅಲ್ಲಮನು ಸಾಧಿಸತಕ್ಕದೇನೂ ಇದ್ದಿಲ್ಲ. ಮಾಯಾಪ್ರಪಂಚದಲ್ಲಿ ಬಳಲಿದ ಜೀವರುಗಳು ಮುಕ್ತಿಯನ್ನು ಕಾಂಕ್ಷಿಸರು. ಆ ಮುಕ್ತಿಸಂಪಾದನಕ್ಕಾಗಿ ನರಜನ್ಮವೆತ್ತುವರು. ಕರ್ಮಭೂಮಿಯೆನಿಪ ಈ ಭಾರತವರ್ಷದಲ್ಲಿ ದೇಹಧರಿಸುವರು. ಅಲ್ಲಮನೇಕೆಜನಿಸಿಡನು? ಇದಕ್ಕುತ್ತರವನ್ನು ಮೇಲೆಕೊಟ್ಟದೆ. ಆದರೆ ಆಸಂದರ್ಭದಲ್ಲಿ ಇನ್ನೊಂದು ಶಂಕೆಯುಂಟಾಗುತ್ತದೆ. ತಾನು ತೋರಲಿಕ್ಕೆ ಸುಜ್ಞಾನಿ ನಿರಹಂಕಾರರೆಂಬ ತಾಯಿ ತಂದೆಗಳೇಕೆ ಬೇಕಾದರು? ಶಿವನಸೃಷ್ಟಿಯಲ್ಲಿ ಇದೊಂದು ಸೋಜಿಗನೆ. ರಾವಣಾದಿ ದುಷ್ಟನಿಗ್ರಹಕ್ಕಾಗಿ ನಾರಾಯಣನು ಅವತಾರ ಗೆಯ್ಯಬೇಕಾಗಿದ್ದರೂ ಪುತ್ರಕಾಂಕ್ಷೆಯಿಂದ ಬಳಲುತ್ತಿರುವ ದಶರಥ ಭೂಪಾಲನನ್ನೆ ನಿಮಿತ್ತವಾಗಿಟ್ಟುಕೊಂಡು ಅವತರಿಸಿದನು. ಕೌರವಾದಿಗಳ ಭೂಭಾರವನ್ನಿಳುಹಬೇಕೆಂಬ ಕೃಷ್ಣನು ಕಂಸನಿಂದ ಗಾಸಿಯಾಗುತ್ತಿರುವ ವಸುದೇವ ದೇವಕಿಯರನ್ನೆ ಮುಂದುಮಾಡಿಹುಟ್ಟಿದನು. ನಾರಾಯಣನಿಗೆ ಹಾಗೇ ತೋರಲಿಕ್ಕೆ ಬರುತ್ತಿದ್ದಿಲ್ಲೆಂತಲ್ಲ. ಅದರಂತೆಯೆ ಲೋಕದಲ್ಲಿ ಅನಾದಿ ವೀರಶೈವ ತತ್ತ್ವವನ್ನು ಪಸರಿಸಲು ಬಂದ ಪ್ರಭುವು ಸುಜ್ಞಾನಿ ನಿರಹಂಕಾರರನು ನಿಮಿತ್ತೀಕರಿಸಿದನು.

ಹಾಗಾದರೆ ಕೃಷ್ಣನು ದೇವಕಿಯ ಗರ್ಭದಲ್ಲಿಯೂ ರಾಮನು ಕೌಸಲ್ಯೆಯ ಬಸುರಲ್ಲಿಯೂ ಬಂದಂತೆ ಅಲ್ಲಮನು ಸುಜ್ಞಾನಾಂಬೆಯ ಗರ್ಭದಿಂದ ಬರಲಿಲ್ಲವಲ್ಲ. ಅಂದಬಳಿಕೇನು ಸುಜ್ಞಾನಿ ನಿರಹಂಕಾರರಪೇಕ್ಷೆಯು? ಕೇಳು. ಈ ತೋರಒಡಲೆ ಒಂದು ಒಡಲಲ್ಲ. ಭೌತಿಕ ಕಾಯದಲ್ಲಿ ಭಕ್ತಿಕಾಯವುಂಟು. ಆ ಭಕ್ತಿಕಾಯವು ಸೂಕ್ಷ್ಮವಾಗಿಹುದು. ಸುಜ್ಞಾನಿ

CC-0. Jangamwadi Math Collection. Digitized by eGangotri

ನಿರಹಂಕಾರರ ಆ ಭಕ್ತಿ ಕಾಯದ ದೆಸೆಯಿಂದಲೆ ಅಲ್ಲಮನು ಅನಾದಿ ಜಂಗಮರೂಪದಿಂದ ಪ್ರಕಟನಾದನು.

## ಅಲ್ಲಮನು ಐತಿಹಾಸಿಕ ಪುರುಷನು.

ಶ್ರೀಮದಲ್ಲಮನ ಅವತಾರವು ಸತ್ಯವಾದುದೆಂಬುದಕ್ಕೆ ಹೇರಳವಾದ ಅವನ ವಚನ ಭಂಡಾರವು ಮುಖ್ಯಸಾಕ್ಷಿಯಾಗಿದೆ. ಇದಲ್ಲದೆ ಅವನ ವಿಭೂತಿಗೆ ಕಾರಣವಾದ ಸುಜ್ಞಾನಾಂಬಾ ನಿರಹಂಕಾರರ ಅರಮನೆಯ ಕುರುಹುಗಳು ಈಗಲು ಶಿಕಾರಪುರ ತಾಲೂಕ ಬಳಗಾಂವಿಯಲ್ಲಿ ಕಂಣಿಗೆ ಬೀಳುವವು. ಈ ಸುಜ್ಞಾನ ನಿರಹಂಕಾರರು ಇಷ್ಟುಜ್ಞಾನಿಗಳಾಗಿಯೂ ಅರಮನೆಯಲ್ಲಿದ್ದರಾದರೆ ಅವರು ಸಂಸಾರದ ಇಡುಕಿರಿನಲ್ಲಿ ಸಿಕ್ಕಿದ್ದಿಲ್ಲವೇನು? ಇಲ್ಲ–ಸಂಸೃತಿಯು ಮನಸಿನಲ್ಲಿ ಅಥವಾ ಅಂತಃಕರಣದಲ್ಲಿದೆ. ಮನೆಯಲ್ಲಿಲ್ಲ–ರಾಜ್ಯಭಾರವನ್ನು ಸಾಗಿಸಿಯೂ ಜನಕನು ಮಹಾಜ್ಞಾನಿಯಾಗಿದ್ದನು. ಆಫ್ರಿಕಾಖಂಡದ ಕಾಡುಗಳಲ್ಲಿರುವ ವನ್ಯಮನುಜರು ಮುಕ್ತಿಭಾಜನವಾಗಿಲ್ಲ. ಇದಕ್ಕೆ ಪೂರ್ವದವರ ಸೂಕ್ತಿಗಳೂ ಉಂಟು "ಮನಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ। ಬಂಧಾಯ ವಿಷಯಾಸಕ್ತಂ ಮುಕ್ತ್ಯೈ ನಿರ್ವಿಷಯಂ ಸ್ಮೃತಂ॥ ಇತ್ಯಾದಿ.

## ಅಲ್ಲಮಶಬ್ದ ನಿರ್ವಚನ.

ಅನಾದಿ ಜಂಗಮರೂಪನಾದ ಪರಶಿವನು ಆವಿರ್ಭವಿಸಿದೊಡನೆಯೆ ನಿರಹಂಕಾರನು ಅವನಿಗೆ ಅಲ್ಲಮನೆಂಬಭಿಧಾನವನಿಟ್ಟನು. ಅಲ್ಲಮ ಶಬ್ದವು ಕನ್ನಡ ಮತ್ತು ಸಂಸ್ಕೃತ ಭಾಷೆಗಳಿಗೆ ಸೇರುತ್ತದೆ. ಪರಶಿವತತ್ತ್ವದ ಗೂಢಾರ್ಥವನ್ನು ಕನ್ನಡನುಡಿಯಿಂದ ಯೋಗ್ಯ ಅಧಿಕಾರಿಗಳಿಗೆ ಸುಲಭವಾಗುವಂತೆ ಬೀರಲಿಕ್ಕೆಬಂದ ಅಲ್ಲಮನು ಕನ್ನಡಹೆಸರಿನಿಂದಲೆ ಅವರಿಗೆ ಪ್ರಿಯನಾಗುತ್ತಿದ್ದನು. ಇದನ್ನರಿತು ನಿರಹಂಕಾರನು ಕನ್ನಡನಿರುಕ್ತಿಯಿಂದಲೆ ಅಲ್ಲಮನೆಂದು ಹೆಸರಿಟ್ಟನು. ನೋಡು— ಬಲ್ಲದೀಶಿಶುವೇತರೊಳಗಿಹ। ನಲ್ಲಹೊರಗಿಹನಲ್ಲ ಭಾವಿಸ। ಲಿಲ್ಲದಿರುತಿಹನಲ್ಲ ವೆನ್ನುತ ತಂದೆ ತಾಯಿಗಳೂ॥ ಎಲ್ಲಜಾಡ್ಯದ ಜಂಜಡಂಗಳ। ನಲ್ಲವೆನಿಸುವ ಬಾಲಕಗೆಬಳಿ। ಕಲ್ಲಮಪ್ರಭುವೆಂಬ ಹೆಸರನು ಕೊಟ್ಟರರ್ತಿಯಲಿ॥ ಈ ಲೀಲಾಶಿಶುವು ಮಾಯಿಕವಾದ ವಿಶ್ವದಬಲೆಯಲ್ಲಿ ಸಿಗದವನಾದುದರಿಂದ ಅದರೊಳಗೆ ಇರುವನಲ್ಲ. ಆದರೆ ತನ್ನ ಸದ್ರೂಪದಿಂದೆಲ್ಲವನ್ನು ವ್ಯಾಪಿಸುವನಾದುದರಿಂದ ಆ ವಿಶ್ವದಹೊರಗಿಹನಲ್ಲ. ವಿಚಾರಿಸಿದರೆ ಎಂದೆಂದಿಗೂ ಇಲ್ಲವಾಗು

CC-0. Jangamwadi Math Collection. Digitized by eGangotri

ವನಲ್ಲ. ಎಂದು ವಿಚಾರಿಸಿ ಆ ತಂದೆತಾಯಿಗಳು ಸರ್ವಜಾಡ್ಯದ ಜಂಜ ಡ ವಂಟದ ಆ ಬಾಲಕನಿಗೆ ಅಲ್ಲಮಪ್ರಭುವೆಂದು ನಾಮವನ್ನಿಟ್ಟರು. ಇ ಲ್ಲಿ ಪ್ರಭುವೆಂಬುದು ಸಂಸಾರದ ಬಲೆಯಲ್ಲಿ ಸಿಲುಕದ ಸ್ವತಂತ್ರನೆಂಬರ್ಥ ವುಳ್ಳದಾಗಿದೆ.

ಶ್ರೀಮದಲ್ಲಮನಾದರು ತನ್ನ ನಾಮವನ್ನು "ಆದಿಯಸಂಗದಿಂದಾದವ ನಲ್ಲ, ಸಂಗಸುಖದೊಳಗಿದ್ದವನಲ್ಲ. ಇಬ್ಬರಸಂಗದಿಂದಾದವನಲ್ಲ ರವಿಸಸಿ ಯಬೆಳಗಿನಿಂದ ಬೆಳೆದವನಲ್ಲ" ಎಂದು ಸಕಲ ಸಂಸಾರಸಂಗದಿಂದ ದೂ ರನೆಂದೂ, ದ್ವಂದ್ವಸುಖದೊಳಗಿಲ್ಲದವನೆಂದೂ ಇತ್ಯಾದಿ ಯಾಗಿ ಕನ್ನಡ ನಿರ್ವಚನದಿಂದಲೆ ಹೇಳಿರುವನು.

ಆದರೆ ಭಾಷಾಗಾಂಭೀರ್ಯವನ್ನು ಸರಸ್ವತಿಯೆ ಬಲ್ಲಳು. ಹಲವು ಶ ಬ್ದಗಳು ಕನ್ನಡವಾಗಿಯೂ ಸಂಸ್ಕೃತವಾಗಿಯೂ ಇವೆ ಅಂತಹ ಶಬ್ದಗಳಲ್ಲಿ ಅಲ್ಲಮಶಬ್ದವು ಒಂದಾಗಿದೆ. ಇಲ್ಲಿ ಕನ್ನಡ ಅಲ್ಲಶಬ್ದದಂತೆ ಸಂಸ್ಕೃತ ಅಲ್ಲ ಶಬ್ದವಾದರು ನಿಷೇಧ ವಾಚಕವಾಗಿದೆ. ಅಂದರೆ "ನೇತಿ ನೇತಿ." ಇ ತ್ಯಾದಿ ಶ್ರುತಿಯಿಂದ ಸರ್ವಪ್ರಾಕೃತ ಹೇಯಗುಣಗಳ ನಿಷೇಧ ಭೂಮಿಯಾ ದ ಪರಮಾತ್ಮವಸ್ತುವೆ ಅಲ್ಲವೆನಿಸುತ್ತದೆ. ಶಬ್ದಕಲ್ಪದ್ರುಮ ಕೋಶದಲ್ಲಿ ಅಲ್ಲಃ—ಪರಮೇಶ್ವರಃ ಎಂದು ನಿರೂಪಿಸಿರುವನು ಮತ್ತು ಅಲ್ಲ ಶಬ್ದವನ್ನು ಅಲ್ ಧಾತುವಿಗೆ "ಕ" ಪ್ರತ್ಯಯದಿಂದ ಸಾಧಿಸಿರುವನು. ಕ ಪ್ರತ್ಯಯ ವು ಎಂಬಲ್ಲಿ ಅಕಾರವೆ ಪ್ರತ್ಯಯವಾಗಿದೆ. ಕ್ ಅನ್ನುವುದು ಇತ್ ಆಗಿದೆ. ಕ್ ಎಂಬ ಇತ್ ಈ ಅ ಪ್ರತ್ಯಯಕ್ಕೆಅನುಬಂಧವಾಗಲಾಗಿ ಧಾತುವಿಗೆ ಗು ಣವೃದ್ಧಿ ಗಳಿಲ್ಲೆಂದು ತೋರಿಸುತ್ತದೆ. ಆದಿಂದ ಅಲ್+—ಅ ಅಲ್ಲ ಎಂದಾಯ್ತು ಕೃದಂತ ಪ್ರತ್ಯಯಗಳೂ ಉಣಾದಿ ಪ್ರತ್ಯಯಗಳೂ ಪರವಾಗಲಾಗಿ ಒಮ್ಮೊ ಮ್ಮೆ ಧಾತುಗತ ವರ್ಣಗಳಿಗಾಗಲಿ ಪ್ರತ್ಯಯಗತ ವರ್ಣಗಳಿಗಾಗಲಿ ದ್ವಿ ತ್ವಾದಿ ವಿಕಾರಗಳಾಗುತ್ತವೆ ಒಂಮೊಂಮೆ ವರ್ಣಗಳ ಆಗಮ ಆದೇಶಗಳು ಆಗುತ್ತವೆ. ಉದಾ:— "ಶೀವಯುಕ್ಸ್ವಜಿಹ್ವಾಗ್ರೀವಾಪ್ವಾಮೀವಾಃ" ಅದರಂತೆ ಇಲ್ಲಿ ಲಕಾರಕ್ಕೆ ದ್ವಿತ್ವವಾಗಿದೆ. ಮಾತಿ—ನಿರ್ಮಾತಿ ಸ್ವ ಶ ರಣಾನಾಂ ಜ್ಞಾನಮಿತಿಮಃ ಮಾ+ಕ—ತನ್ನ ಶರಣಾಗತರಿಗೆ ಜ್ಞಾನವನುಂ ಟುಮಾಡುವನು ಮಃ-ಅಲ್ಲ+ಮ— ಅಲ್ಲಮ. ಪರಬ್ರಹ್ಮಸ್ವರೂಪನಾಗಿ ತನ್ನ ಪಾದಶರಣರನ್ನು ಜ್ಞಾನವಂತರನ್ನಾಗಿ ಮಾಡುವನು ಅಲ್ಲಮನು— ಅಲ್ಲಮಶಬ್ದವನ್ನು ಇನ್ನೊಂದು ರೀತಿಯಿಂದಲು ನಿರ್ವಚಿಸಬಹುದು. ಅಲ ತೀತಿ ಅಲ್—(ಅಲ್‌ಧಾತುವಿಗೆ ಕ್ವಿಪ್ ಪ್ರತ್ಯಯವು.) ರಮಾತ ಇತಿ ರಮಃ

CC-0. Jangamwadi Math Collection. Digitized by eGangotri

(ರಮ ಧಾತುವಿಗೆ ಅಚ್ ಪ್ರತ್ಯಯವು.) ಅಲ್+ರಮಃ–ಅಲ್ಲಮಃ (ರಲಯೋ ರಭೇದಃ) ಕುತ್ಸಿತಾನಿ–ಕುತ್ಸನೈಃ ಎಂಬ ಸೂತ್ರಕ್ಕೆ ಉದಾಹರಣವೊಂದಾದ ಮೀಮಾಂಸಕ ದುರ್ದುರೂಟಃ ಎಂಬಲ್ಲಿ ಜ್ಞಾನೇಂದ್ರ ಸರಸ್ವತಿಯ ತತ್ತ್ವಬೋಧಿನೀ ವ್ಯಾಖ್ಯೆಯಲ್ಲಿ. "ರಲಯೋರೇಕತ್ವ ಸ್ಮರಣಾಲ್ಲಸ್ಯಂಃ" ಎಂದು ಅಡೆ. ಹಾಗು ತರುಣಸ್ತಲುನೋಯುವಾ. ರಮುಕೋಲಮುಕೋ ವಿಲಾಸೀರಮ+ಕ್ವುನ್ ರಸ್ಯಲಃ) ಅಲ್ ಅಂದರೆ ನಿವಾರಿಸು ಎಂಬ ಧಾತುವಿಗೆ ಕ್ವಿಪ್ ಪ್ರತ್ಯಯವು ಹತ್ತಿ ಅಲ್ ಅಂದರೆ ನಿವಾರಿಸುವನು ರಮ ಧಾತುವಿಗೆ ಅಚ್ ಪ್ರತ್ಯಯವು ಹತ್ತಿ ರಮ ರಮಿಸುವನು ಆನಂದ ಭರಿತನು. ಆಮೇಲೆ ಅಲ್+ರಮ—ಅಲ್ಲಮ. ರಕಾರಕ್ಕೂ ಲಕಾರಕ್ಕೂ ಅಭೇದವು. ತರುಣನೆಂದರೂ ತಲುನನೆಂದರು ಯುವಕನೆಂಬರ್ಥವು. ರಮುಕನೆಂದರು ಲಮುಕನೆಂದರು ವಿಲಾಸಿಯೆಂಬರ್ಥ. ಅಲ್ಲಮನೆಂದರೆ ತನ್ನ ಶರಣಾಗತರ ಪಾಪವನ್ನು, ಮಲವನ್ನು, ನಿವಾರಿಸುವ, ಶಿವಾನಂದದಲ್ಲಿ ಮಗ್ನನಾದ ಶಿವಯೋಗಿ ಎಂಬರ್ಥವು. ಈ ವ್ಯುತ್ಪತ್ತಿಯಲ್ಲಾದರು ನಿಷೇಧಾರ್ಥವು ಮುಖ್ಯವಾಗಿದೆ. ಕನ್ನಡ ನಾಡಿನಲ್ಲಿಯೆ ಪ್ರಕಟನಾಗಿ ಕನ್ನಡಿಗರಿಗೆ ಪರತತ್ತ್ವವನ್ನು ಬೋಧಿಸಿ ಕನ್ನಡನುಡಿಯಿಂದಲು ಕನ್ನಡಿಗರಿಂದಲು ಪರಮ ಪಾವನವಾದ ವೀರಶೈವವನ್ನು ಲೋಕದಲ್ಲಿ ಮೆರೆಯಿಸಲಿಕ್ಕೆ ಬಂದ ಪರವಸ್ತುವಿಗೆ ಕನ್ನಡದಲ್ಲಿಯೆ ಹೆಸರಿಟ್ಟಂತೆ ನಟಿಸಿ ಸಂಸ್ಕೃತ ಭಾಷೆಯಲ್ಲಿ ಪರಶಿವಬೋಧಕನಾಮವನ್ನು ನಿರ್ಮಳನಿಟ್ಟಿದು ಆತನ ಜ್ಞಾನದ ಪರಿಪಾಕ-ಪರಿಣಾಮವು.

ಸಂಸ್ಕೃತದ ಪ್ರಭುಲಿಂಗಲೀಲಾಕಾರನು ಕೊಟ್ಟ ಅಲ್ಲಮ ಶಬ್ದನಿರ್ವಚನವು ಬಹಳ ಸಯುಕ್ತವೆಂದು ನಾನುಹೇಳಬೇಕಾಗಿಲ್ಲ. ಕೇವಲ ಶಿವಯೋಗಜ್ಞನೂ ವ್ಯಾಕರಣ ಶಾಸ್ತ್ರಪಾರಂಗತನೂ ಆದ ಆತನು ಕೊಟ್ಟ ನಿರ್ವಚನವು ನನ್ನಂತಹ ಒಬ್ಬ ಮಂದಮತಿಯಿಂದ ಸಮರ್ಥನವನ್ನು ಅಪೇಕ್ಷಿಸದು. ಆದರು ವ್ಯಗ್ರಯು ಈ ಶಬ್ದವ್ಯುತ್ಪತ್ತಿಯನ್ನು ತಿಳಿಯದೆ ಆಕ್ಷೇಪಿಸಿರುವದರಿಂದ ಆಕ್ಷೇಪ ನಿರಾಕರಣವು ಅವಶ್ಯವಾಗಿದೆ

ಪ್ರಭುಲಿಂಗಲೀಲೆಯ ಎರಡನೆಯಧ್ಯಾಯದಲ್ಲಿ ೭೭ನೆಯ ಶ್ಲೋಕದಿಂದ ಗ್ರಂಥಕರ್ತನು ಅಲ್ಲಮಶಬ್ದ ನಿರ್ವಚನವನ್ನು ಯಥಾಶಾಸ್ತ್ರವಾಗಿ ಮಾಡಿರುವನು—ಮೊದಲು ಅಕಾರವು ಪರಬ್ರಹ್ಮ ಪರಶಿವ ವಾಚಕನೆಂದು ಶ್ರುತ್ಯನುಭವಗಳಿಂದ ಸಾಧಿಸಿರುವನು. ಆಬಳಿಕ ಪರಶಿವನ ಶ್ರವಣ ಮ

CC-0. Jangamwadi Math Collection. Digitized by eGangotri

ನನ ಧ್ಯಾನಗಳಿಂದಾದ ಸಾಕ್ಷಾತ್ಕಾರದಿಂದ ಪರಶಿವನಂತಿರುವ ಯೋಗಿಗಳು ಅತ್ ಎನಿಸಿ ಕೊಂಬರು ಎಂದು ತೋರಿಸುವನು ಇಂತಪ್ಪಯೋಗಿಗಳನ್ನು (ಲಾ) ಅನುಗ್ರಹಿಸುವವದಾದ (ಮಾ) ಅಂದರೆ ಪರಶಕ್ತಿರೂಪ ವಿದ್ಯೆಯು ಯುಳ್ಳಾತನಾದುದರಿಂದ (ಮ) ಅಲ್ಲಮನೆಂತಲೂ ಸಾಧಿಸಿರುವನು. "ಅಮಿತಿಬ್ರಹ್ಮ ಸನ್ಮಾತ್ರಂ ಗಚ್ಛತೀತಿ ಗಮುಚ್ಯತೇ" ಎಂದು ಅಂಗಶಬ್ದದ ನಿರ್ವಚನವನ್ನು ಅಕಾರವಾಚ್ಯವಾದ ಪರಬ್ರಹ್ಮ ಚೈತನ್ಯವನ್ನು ಹೊಂದುವ ಜೀವಚೈತನ್ಯವೇ ಅಂಗವೆಂದು ವೀರಶೈವ ಶಾಸ್ತ್ರಗಳು ಹೇಳುವುದರಿಂದ ಅಕಾರವು ಬ್ರಹ್ಮವಾಚಕವಹುದು. "ಅಕಾರೋ ವೈಸರ್ವಾವಾಕ್" ಆಕಾರವು ಸರ್ವ ವಾಗ್ರೂಪವಾದುದು ಎಂಬ ಶ್ರುತಿಯನ್ನಾದರು ಪ್ರಭುಲಿಂಗ ಲೀಲಾಕರನು ಈ ವಿಷಯದಲ್ಲಿ ಉದಾಹರಿಸಿರುವನು. "ಅಕ್ಷರಾಣಾಮಕಾರೋಸ್ಮಿ" ಎಂಬ ಗೀತೋಕ್ತಿಯಾದರು ಇದೇ ಅರ್ಥವನ್ನು ಹೇಳುತ್ತದೆ. ಆದುದರಿಂದ ಅಕಾರವು ಪರಶಿವ ವಾಚಕನೆಂದು ಪ್ರಭುಲಿಂಗ ಲೀಲಾಕಾರನು ಸಾಧಿಸಿರುವುದು ಯಥಾರ್ಥವೆ. ಅಂತಃ—ಪರಬ್ರಹ್ಮದಂತಾಚರಿಸುವ ಯೋಗಿಗಳು ಎಂದು ಸಾಧಿಸಿರುವುದಾದರು ಸಮಂಜಸವೆ "ಸರ್ವಪ್ರಾತಿಪದಿಕೇಭ್ಯಃ ಕ್ವಿಬ್ವಾವಕ್ತವ್ಯಃ" ಎಂಬ ವಾರ್ತಿಕದಿಂದ ಅಃ ಎಂಬ ಪ್ರಾತಿಪದಿಕಕ್ಕೆ ಕ್ವಿಪ್ ಪ್ರತ್ಯಯವು ಹತ್ತಿ ಲೋಪವಾಗಿ ಅಃ ಎಂಬ ನಾಮಧಾತುವಾಯ್ತು. (ಅತಿ). ಅದಕ್ಕೆ ತಿಪ್ ಪ್ರತ್ಯಯವು ಹತ್ತಿ "ಅತಿ" ಎಂಬ ಕ್ರಿಯಾಪದವಾಗುತ್ತದೆ.) ಅತಿ ಎಂಬುದರರ್ಥವು ಪರಬ್ರಹ್ಮದಂತಾಚರಿಸುತ್ತಾನೆ ಎಂಬುದು. ಆ ಧಾತುವಿಗೆ ಶತೃ ಎಂಬ ವರ್ತಮಾನ ಕೃದಂತ ಪ್ರತ್ಯಯವು ಹತ್ತಲು ಅತ್ ಎಂದರೆ ಪರಬ್ರಹ್ಮದಂತೆ ಆಚರಿಸುವ ಶೀಲವುಳ್ಳ ಎಂಬರ್ಥವು ಆಗುತ್ತದೆ. "ಉಗಿದಚಾಂಸರ್ವನಾಮಸ್ಥಾನೇ ಧಾತೋಃ" ಎಂಬ ಸೂತ್ರದಿಂದ ಸರ್ವನಾಮಸ್ಥಾನವೆನಿಸಿ ಕೊಂಬ ಮೊದಲನೆಯ ಐದುರೂಪಗಳಲ್ಲಿ ನುಮಾಗಮವು ಪ್ರಾಪ್ತವಾಗಿ ಅಂತಃ—ಪರಬ್ರಹ್ಮದಂತಾಚರಿಸುವ ಶೀಲವುಳ್ಳವರು ಎಂದಾಯ್ತು. ಅಂತಹರನ್ನು ಅನುಗ್ರಹಿಸುವದರಿಂದ ಅತಃ ಲಾತಿ ಇತಿ ಅಲ್ಲಃ ಲಾ ಆದಾನೇ ಎಂದು ಅದಾದಿಗಣದಲ್ಲಿ ಸ್ವೀಕರಿಸು, ಅನುಗ್ರಹಿಸು, ಎಂಬ ಅರ್ಥವುಳ್ಳ ಲಾ ಎಂಬ ಧಾತುವುಂಟು "ಆತೋನುಪಸರ್ಗೇಕಃ" ಎಂಬ ಸೂತ್ರದಿಂದ ಉಪಸರ್ಗರಹಿತನಾದ ಲಾ ಧಾತುವಿಗೆ ಕರ್ಮವಿಭಕ್ತಿಯಲ್ಲಿರುವ ಅತಃ ಎಂಬ ಉಪಪದವಿರಲು ಲಾ ಧಾತುವಿಗೆ ಕ ಪ್ರತ್ಯಯವು ಬರುವುದು ಆಗ ಅತಃ ಲಾತೀತಿ ಅಲ್ಲಃ ಎಂಬ ರೂಪವಾಯ್ತು. "ಅಜಾದ್ಯ ತಷ್ಟಾಪ್" ಎಂಬ ಸೂತ್ರದಿಂದ, ಅಕಾರಾಂತವಾದ ಅಲ್ಲ ಪದಾರ್ಥದ ಸ್ತ್ರೀತ್ವವನ್ನು

CC-0. Jangamwadi Math Collection. Digitized by eGangotri

ತೋರಿಸುವಲ್ಲಿ ಟಾಪ್ ಎಂಬ "ಆ" ಪ್ರತ್ಯಯವು ಹತ್ತಿತು. ಆಗ ಅಲ್ಲಾ ಎಂದು ರೂಪಾಯ್ತು. ಮಾಙ್ಜ್ಞಾನೇ ತಿಳಿಎಂಬರ್ಥದಲ್ಲಿ ಮಾಧಾತುವದೆ ಅದಕ್ಕೆ ಕ್ವಿಪ್ ಪ್ರತ್ಯಯವು ಹತ್ತಿ ಮಾ ಎಂಬ ನಾಮ ರೂಪವಾಗುತ್ತದೆ. ಕ್ವಿಪ್ ಪ್ರತ್ಯಯವು ಇಲ್ಲಿ ಕರಣಾರ್ಥದಲ್ಲಿ ಹತ್ತಿರುವುದರಿಂದ ಮಾ ಶಬ್ದಾರ್ಥವು ಜ್ಞಾನಶಕ್ತಿಯೆಂದಾಗುತ್ತದೆ. ಅಲ್ಲಾ ಮಾಯಸ್ಯಾಸ್ತಿಸಃ ಅಲ್ಲಮಃ ಶಿವ ಯೋಗಿಗಳನ್ನು ಅನುಗ್ರಹಿಸುವ ಶಕ್ತಿಯುಳ್ಳವನೆಂಬರ್ಥ ಇದು ಬಹು ವ್ರೀಹಿಯು "ಸ್ತ್ರಿಯಾಃ ಪುಂವದ್ಭಾಷಿತ ಪುಂಸ್ಕಾದನೂಙ್ ಸಮಾನಾಧಿಕರ ಣೇ ಸ್ತ್ರಿಯಾಮ ಪೂರಣೀ ಪ್ರಿಯಾದಿಷು" ಎಂಬ ಸೂತ್ರದಿಂದ ಅಲ್ಲಾ ಎಂಬ ಪೂರ್ವಪದಕ್ಕೆ ಪುಂವದ್ಭಾವವಾಗಿ ಅಲ್ಲ ಎಂದಾಯ್ತು "ಗೋಸ್ತ್ರಿಯೋರುಪ ಸರ್ಜನಸ್ಯ" ಎಂಬ ಸೂತ್ರದಿಂದ ಚರಮಾವಯವವಾದ ಮಾಶಬ್ದವು. ಮ ಎಂದಾಯ್ತು ಮತ್ತು ಅಲ್ಲಮಃ ಎಂಬರೂಪವಾಯ್ತು

ಪ್ರಭು ಶಬ್ದವು ವಿಶ್ವಾಧಿಕತ್ವವನ್ನು ತಿಳಿಸುತ್ತದೆ. ಅಲ್ಲಮಸಂಜ್ಞಕ ಪ್ರಭುಃ ಅಲ್ಲಮಪ್ರಭುಃ ಶಾಕಪ್ರಿಯಃ ಪಾರ್ಥಿವ ಶಾಕಪಾರ್ಥಿವಃ ಎಂಬಂ ತೆ "ಶಾಕಪಾರ್ಥಿವಾದೀನಾಂ ಸಿದ್ಧಯೇ ಉತ್ತರಪದಲೋಪಸ್ಯೋ ಪಸಂ ಖ್ಯಾನಂ" ಎಂಬೀವಾರ್ತಿಕದಿಂದ ಅಲ್ಲಮಸಂಜ್ಞಕಃ ಎಂಬ ಬಹುವ್ರೀಹಿ ಯಲ್ಲಿಯ ಉತ್ತರಪದವಾದ ಸಂಜ್ಞಕ ಎಂಬ ಪದವು ಲೋಪವಾಗಿ ಅಲ್ಲ ಮ ಪ್ರಭುಃ ಎಂಬ ರೂಪವಾಯ್ತು.

ಸಂಸ್ಕೃತ ಪ್ರಭುಲಿಂಗಲೀಲೆಯ ಎರಡನೆಯಧ್ಯಾಯದ ನೂರನೆಯ ಶ್ಲೋಕದಲ್ಲಿ ಅಲ್ಲಮಾಪ್ರಭುವೆಂದೂ ಪ್ರಭುವಿನಹೆಸರು ಪ್ರಸಿದ್ಧವಿತ್ತೆಂದು ಅದರ ನಿರ್ವಚನವನ್ನು ಮಾಡಿರುವನು. ಆದರೆ ಕೆಲವರು ತಮಗೆ ಈ ಶ್ಲೋಕದರ್ಥವಾಗದೆ ಅಲ್ಲಮಾ ಎಂದೂ ಶ್ರೀಪ್ರಭುವಿನ ನಾಮವಿದ್ದುದಾಗಿ ಗ್ರಂಥಕಾರನು ಹೇಳಿದಂತೆ ಭ್ರಮಿಸುವರು ಈ ಪದ್ಯವನ್ನು ನೋಡು ಕಿಂ ಚಾಕ್ಕಾಲ್ಲಾಂಬಾಂಬಿಕಾದ್ಯಾ ಅಂಬಾರ್ಥಾಃ ಪರಿಕೀರ್ತಿತಾಃ । ಸಾಮಾ ಯಾ ರುದ್ರಮಹಿಷೀ ಸರ್ವಸ್ಯಾಲ್ಲಾ ಪ್ರಕೀರ್ತ್ಯತೇ ॥ ಸಭಾಯಾಂ ಗರ್ವಿ ತಾಂ ತಾಂಪ್ರತ್ಯುವಾಚ ತತ್ರಾಲ್ಲಮಾಲ್ಲಮಾ । ಇತ್ಯಲ್ಲಮಾ ಪ್ರಭುರಿತಿ ಪ್ರೋಚ್ಯತೇ ಪ್ರಮಥೋತ್ತಮೈಃ ॥ ೯೯-೧೦೦- ಮತ್ತೇನಂದರೆ ಅಕ್ಕಾ ಅಲ್ಲಾ ಅಂಬಾ ಅಂಬಿಕಾ ಎಂಬಿವೆ ಮೊದಲಾದ ಶಬ್ದಗಳು ತಾಯಿ ಎಂ ದು ಅರ್ಥವುಳ್ಳವು. ರುದ್ರಶಕ್ತಿಯಾದ ಜ್ಞಾನಶಕ್ತಿಯು ಈ ಎಲ್ಲ ಪ್ರಪಂಚಕ್ಕೆ

CC-0. Jangamwadi Math Collection. Digitized by eGangotri

ತಾಯಿಯಾಗಿ ಅಲ್ಲಾ ಅನ್ನಿಸುವಳು. ಶಿವಸಭೆಯಲ್ಲಿ ಗರ್ವಿತಳಾದ ಆ ಕೆಯನ್ನು ಕುರಿತು ಅಲ್ಲ—ಅಮ್ಮಾ-ಮಾ—ಬೇಡ ಎಂದು ಎರಡು ಸಾರೆ ಹೇಳಿದುದರಿಂದ ಅಲ್ಲಮಾಪ್ರಭು ಎಂದು ಪ್ರಮಥೋತ್ತಮರಿಂದ ಕರೆಯಲ್ಪ ಡುವನು. ಇಲ್ಲಿ ಅಲ್ಲಮಾ ಇತಿ ವಕ್ತೀತಿ ಅಲ್ಲಮಾ ವಚನಃ ಪ್ರಭುಃ ಅಲ್ಲ ಮಾಪ್ರಭುಃ ಎಂದು ಮಧ್ಯಮಪದಲೋಪ ಸಮಾಸವಾಗಿದೆ. ಅಥವಾ ಅಲ್ಲ ಮಾ ಇತಿ ವಚನಂ ಯಸ್ಯ ಎಂದು ಬಹುವ್ರೀಹಿಯನ್ನು ಮಾಡಿ ಶಾಕ ಪಾರ್ಥಿವಾದಿ ವಾರ್ತಿಕದಂತೆ ಬಹುವ್ರೀಹಿಯ ಉತ್ತರಪದಲೋಪ ಸಮಾ ಸವನ್ನಾದರು ಮಾಡಬಹುದು.

ಸಂಸ್ಕೃತ ಪ್ರಭುಲಿಂಗ ಲೀಲೆಯ ಆರನೆಯಧ್ಯಾಯದಲ್ಲಿ ಗ್ರಂಥಕಾರ ನು ಅಲಂಮಾ ಪ್ರಭುವೆಂದು ನಾಮವನ್ನು ನಿರ್ವಚಿಸಿರುವನು. ಇಲ್ಲಿಯಾ ದರು ಛಿದ್ರಾನ್ವೇಷಿಗಳು ಅಲಂಮಾ ಎಂದು ನಾಮವನ್ನು ಕಲ್ಪಿಸಿ ಈ ಹೆಸ ರು ಅಲ್ಲಮಾ ಎಂಬ ಹೆಸರಿನೊಡನೆ ಸ್ತ್ರೀಲಿಂಗವೆಂದು ಹಾಸ್ಯಮಾಡಲು ಯತ್ನಿಸಿರುವರು. ಆ ಶ್ಲೋಕವನ್ನು ನೋಡಿರಿ "ತಸ್ಮಾದಲಂ ಶಬ್ದನಿಷೇಧ ಕಾರ್ಥ ಮಾಶಬ್ದಯೋಗಾಚ್ಚ ಭವೇದಲಂಮಾ। ಸಂಜ್ಞಾಪ್ಯಲಂಮಾಪ್ರ ಭುರಿತ್ಯ ಜಸ್ರಂಭೂ ಯಾಜ್ಜನಾಜ್ಞಾನನಿರೋಧಿಕೇಯಂ" ॥ ಅಲಂಶಬ್ದವೂ ನಿಷೇಧವಾಚಕ ಮಾಃ ಶಬ್ದವೂ ಕೂಡಿದುದರಿಂದ ಅಲಂಮಾ ಎಂದಾಯಿತು. ಆದುದರಿಂದ ಅಲಂಮಾ ಪ್ರಭುವೆಂದು ಈ ಶಿಶುವಿನ ಅಭಿದಾನವು ಜನದ ಅಜ್ಞಾನವನ್ನು ದೂರಮಾಡತಕ್ಕದಾಗಿದೆ. ಅಲಂಮಾಪ್ರಭು ಶಬ್ದದ ನಿ ರ್ವಚನವಾದರು ಅಲ್ಲಮಾ ಪ್ರಭುನಾಮ ನಿರ್ವಚನದಂತೆಯೆ ಮಧ್ಯಮ ಪದಲೋಪ ಸಮಾಸವಾಗಲಿ ಶಾಕಪಾರ್ಥಿವಾದಿ ವಾರ್ತಿಕದಂತೆ ಬಹು ವ್ರೀಹಿಯ ಉತ್ತರಪದಲೋಪ ಸಮಾಸವಾಗಲಿ ಆದೆ.

ಪ್ರಭುವಿಗೆ ಅಲ್ಲಮನೆಂದೂ ಅಲ್ಲಮಪ್ರಭುವೆಂದೂ ನಾಮವಿದ್ದಿತು. ಆದರು ಆತನ ಮೇಲಿನ ಅಸಾಧಾರಣ ಭಕ್ತಿಯಿಂದ ಆ ನಾಮದಲ್ಲಿ ಅಲ್ಪ ವ್ಯತ್ಯಾಸವನ್ನು ಮಾಡಿ ಆತನಲ್ಲಿಯ ಅಲೌಕಿಕ ಗುಣಗಳನ್ನು ಪ್ರಭುವಿನ ಭಕ್ತನಾದ ಸಿರಹಂಕಾರನೂ ಇತರರೂ ಪ್ರಕಟಿಸಿರುವರು. ಅಥವಾ ಕವಿ ಯು ಭಕ್ತಿಪರವಶನಾಗಿಯಾದರು ಹಾಗೆ ಮಾಡಿರಬಹುದು. ಇಂತಹ ಉದಾಹರಣಗಳು ವಾಙ್ಮಯದಲ್ಲಿ ಹೇರಳವಾಗಿವೆ. ನೋಡು ರಾಜನ್ ಶಬ್ದವು "ಕನಿನ್‌ಯುವೃಷಿ ತಕ್ಷಿ ರಾಜಿಧನ್ವಿದ್ಯು ಪ್ರತಿದಿವಃ" ಎಂಬ ಸೂ ತ್ರದಿಂದ ರಾಜ ಧಾತುವಿಗೆ ಕನಿನ್ ಪ್ರತ್ಯಯವು ಹತ್ತಿ ಆಗಿರುವುದು. ಆದರೆ ಕಾಳಿದಾಸನು ರಘುವಂಶದ ನಾಲ್ಕನೆಯ ಸರ್ಗದ ಹನ್ನೊಂದನೆಯ


CC-0. Jangamwadi Math Collection. Digitized by eGangotri

ಶ್ಲೋಕದಲ್ಲಿ ರಾಜ ಶಬ್ದವನ್ನು ರಂಜ ಧಾತುವಿನಿಂದ ಪ್ರಜಗಳನ್ನು ರಂಜಿಸು ವನೆಂಬರ್ಥದಲ್ಲಿ ನಿರ್ವಚನಂ ಗೆಯ್ದಿರುವನು "ಯಥಾಪ್ರಹ್ಲಾದನಾಚ್ಚಂದ್ರಃ ಪ್ರತಾಪಾತ್ತಪನೋಯಥಾ । ತಥೈವ ಸೋಭೂದನ್ವರ್ಥೋ ರಾಜಾ ಪ್ರಕೃತಿ ರಂಜನಾತ್ ॥ ಆಹ್ಲಾದವನ್ನುಂಟುಮಾಡುವದರಿಂದ ಶಶಿಗೆ ಚಂದ್ರನೆಂದೂ ಪ್ರತಾಪದಿಂದ ಸೂರ್ಯನಿಗೆ ತಪನನೆಂದೂ ಹೆಸರು ಅವರೀರ್ವರಿಗೆ ಅನ್ವರ್ಥವಾಗಿರುವಂತೆ ಪ್ರಕೃತಿಗಳ ಅಂದರೆ ಪ್ರಜಗಳ ರಂಜನದಿಂದ ಅವನಿಗೆ ಅನ್ವರ್ಥವಾಗಿಯೆ ರಾಜನೆಂಬ ನಾಮವು. ಒಂದು ಪದಾರ್ಥದಲ್ಲಿರುವ ಗುಣಗಳನ್ನು ತೋರಿಸಲಿಕ್ಕಾಗಿ ನಾಮದ ಅಕ್ಷರಗಳನ್ನು ವ್ಯತ್ಯಾಸಪಡಿಸಿದ ಉದಾಹರಣಗಳು ವಶಿಷ್ಠನೆಂಬಲ್ಲಿ ವಸಿಷ್ಠನೆಂದು ತಾಲವ್ಯಶಕಾರಕ್ಕೆ ದಂತ್ಯಸಕಾರವನ್ನು ಹಾಕುವುದೂ. ಅಗಸ್ತ್ಯನೆಂಬಲ್ಲಿ ಅಗಸ್ತಿಯೆಂದು ಯಕಾರಕ್ಕೆ ಇಕಾರವನ್ನು ಹಾಕುವುದೂ ಉದಾಹರಣವಾಗಿವೆ. ವಶಿಷ್ಠನೆಂಬಲ್ಲಿ ವಶಿಗಳಲ್ಲಿ ಶ್ರೇಷ್ಠನು ಎಂದೂ ವಸಿಷ್ಠನೆಂಬಲ್ಲಿ ಪರಮತೇಜಸ್ವಿಯೆಂತಲೂ ಅರ್ಥವು ಲಭಿಸುತ್ತದೆ. ಅಗಸ್ತ್ಯನೆಂಬಲ್ಲಿ ವಿಂಧ್ಯವೆಂಬ ಅಗವನು ಅಂದರೆ ಪರ್ವತವನ್ನು ಶಿಷ್ಯತ್ವೇನಸ್ವೀಕರಿಸಿ ವೃದ್ಧಿಪಡಿಸಿದವನೆಂದು ಅರ್ಥವು. ಅಗಂ ಸ್ತ್ಯಾಯತೀತಿ ಅಗಸ್ತ್ಯಃ. ಸ್ತ್ಯೈಧಾತುವಿಗೆ ಕ ಪ್ರತ್ಯಯವು. ಅಗಸ್ತಿ ಎಂಬಲ್ಲಿ ವಿಂಧ್ಯವೆಂಬ ಅಗವನ್ನು ಅಂದರೆ ಪರ್ವತವನ್ನು ಒಗೆದವನು ಅಂದರೆ ಅದರ ಗರ್ವವನ್ನು ಖಂಡಿಸಿದವನೆಂಬರ್ಥವು. ಇಲ್ಲಿ ಅಸ್ ಒಗೆ ಎಂಬಧಾತುವಿಗೆ "ಸೇಸ್ತಿಃ" ಎಂಬ ಉಣಾದಿ ಸೂತ್ರದಲ್ಲಿ ಹೇಳಿದ ತಿ ಯೆಂಬಪ್ರತ್ಯಯವು ಅಸ್ ಧಾತುವಿಗೆ ಹತ್ತಿ ಅಗಮಸ್ಯತೀತಿ ಅಗಸ್ತಿಃ ಎಂದಾಗಿದೆ. ಅದರಂತೆಯೆ ಇಲ್ಲಿಯಾದರು ಕವಿಯು ಶ್ರೀಮದಲ್ಲಮನ ಅಭಿಧಾನದಲ್ಲಿ, ಆತನ ವಿಶೇಷ ಗುಣಗಳನ್ನು ತೋರಿಸಲಿಕ್ಕಾಗಿ ವ್ಯತ್ಯಾಸವನ್ನು ಮಾಡಿರುವುದು ಬಹಳ ಮಾರ್ಮಿಕವಾಗಿದೆ.

ಕರ್ಣಾಟಕ ಸಂಸ್ಕೃತ ಭಾಷಾ ಪರಿಚಯ ವಿಲ್ಲದೆ ಅಲ್ಲಮನೆಂಬಭಿಧಾನವು ಅಲ್ಲಮಗೀರ ಎಂಬ ಹೆಸರಿನಂತೆ ಮುಸಲ್ಮಾನಿ ಅಥವಾ ಪಾರಸಿ ಇರಬಹುದೇ ಎಂದು ಹಾಸ್ಯಮಾಡುವುದು ಅತ್ಯನುಚಿತವಾಗಿದೆ. ಮೊತ್ತಮೊದಲು ಅಲ್ಲಮಗೀರ ಎಂಬನಾಮವು ಪಾರಸಿಕ ಅಥವಾ ಮುಸಲ್ಮಾನಿ ಭಾಷೆಯಲ್ಲಿಲ್ಲ; ಅಲಂಗೀರ ಎಂಬುದುಂಟು. ಹಾಗಲ್ಲದೆ ಕೇವಲ ವರ್ಣಗಳಾಗಲಿ ಧ್ವನಿಯಾಗಲಿ ಹೋಲುತ್ತದೆಂದು ಇದು ಪರಕೀಯ ಶಬ್ದವೆನ್ನಬಹುದಾದರೆ ವರಾಹವಾಚಕ ಮದಾರವೆಂಬ ಸಂಸ್ಕೃತನಾಮವು ಮದಾರನೆಂಬ ಹೆಸರು ಮುಸಲ್ಮಾನಿ ಭಾಷೆಯಲ್ಲಿರುವುದರಿಂದ ಅವೆ ಭಾಷೆಯದೆನ್ನಬೇಕಾದೀತು. ನೂರೊಂದು ಸ್ಥಳಗಳಿಂದ ಹುಟ್ಟಿದನೂರ್ರೊಂದಪ್ಪನೆಂಬ

CC-0. Jangamwadi Math Collection. Digitized by eGangotri

ಹೆಸರು ಮುಸಲ್ಮಾನೀ ಸೂರಸಾಹೇಬನೆಂಬ ಹೆಸರಿನಿಂದ ಬಂದುದೆನ ಬಹುದು.

ಶ್ರೀಮದಲ್ಲಮನು ಸುಜ್ಞಾನ ನಿರಹಂಕಾರರಿಗೆ ಜನಿಸಿದ ಅಥವಾ ಅ ವರೀರ್ವರಿಗಾಗಿ ಅವತರಿಸಿದ ಪರಶಿವ ಮೂರುತಿಯೆಂಬುದು ಈ ವರೆಗಿನ ನಿಬಂಧದಿಂದ ತೋರಿಬರುತ್ತದೆ. ಆದರೆ ತಾನೆ ಪರಶಿವನಾಗಿದ್ದರೆ ಶಾಲೆಗೇ ಕೆ ಹೋಗುತ್ತಿದ್ದನು? ಪ್ರಭುಲಿಂಗ ಲೀಲೆಯಲ್ಲಿ ಆತನು ಶಾಲೆಗೆ ಹೋಗು ತ್ತಿದ್ದನೆಂದು ಬರೆದಿದೆಯಲ್ಲ! ಎಂದು ಸಂಶಯವನ್ನು ಪಡಬಹುದು. ಇದು ಸರಿಯಲ್ಲ. ಅವತಾರ ಪುರುಷರು ಲೋಕದವರಂತೆ ನಟಿಸಿ ತಂಮ ಅಲೌ ಕಿಕ ಶಕ್ತಿಸಾಮರ್ಥ್ಯಗಳಿಂದ ಅವತಾರಪುರುಷರೆಂಬುದನ್ನು ತೋರಿಸುವರು. ರಾಮಾಯಣದ ಬಾಲಕಾಂಡದ ೧೮ ನೆಯ ಸರ್ಗದಲ್ಲಿ ವಿಷ್ಣುವಿನ ಅವತಾ ರವಾದ ರಾಮಲಕ್ಷ್ಮಣಭರತಶತೃಘ್ನರನ್ನು ಕುರಿತು "ತೇ ಯದಾ ಜ್ಞಾ ನಸಂಪನ್ನಾಸ್ಸರ್ವೇಸಮುದಿತಾಗುಣೈಃ॥ ಹ್ರೀಮಂತಃ ಕೀರ್ತಿಮಂತಶ್ಚ ಸ ರ್ವಜ್ಞಾ ದೀರ್ಘದರ್ಶಿನಃ॥— ತೇಚಾಪಿ ಮನುಜವ್ಯಾಘ್ರಾ ವೈದಿಕಾಧ್ಯಯ ನೇ ರತಾಃ ಪಿತೃಶುಶ್ರೂಷಣರತಾ ಧನುರ್ವೇದೇಚನಿಷ್ಠಿತಾಃ॥" ಇಂತೆಂ ದು ಬಾಲಕರಿಗೆ ತಕ್ಕ ಅಧ್ಯಯನಾದಿಗಳನ್ನು ಮಾಡಿದಂತೆಯೂ, ಆಯಾ ವಯಸ್ಸಿಗನುಸರಿಸಿ ಆಯಾ ಜ್ಞಾನಸಂಪನ್ನರಾದಂತೆಯೂ ವರ್ಣಿಸಿದೆ. ಅ ದರಂತೆಯೆ ಪರಶಿವಾವತಾರನಾದ ಅಲ್ಲಮನು ಶಾಲೆಗೆ ಹೋಗಿದ್ದನು. ಪ್ರಭು ಲಿಂಗಲೀಲಾಕಾರನಾದರು "ಅಥಶಿಶೂನನುಸೃತ್ಯ ವಿಭುಃ ಸ್ವಯಂ ಶಿಶು ರಿವಾಪ್ರತಿಮಾನ ವಿಹಾರವಾನ್" ಎಂದು ಬಾಲಕರನ್ನು ಅನುಸರಿಸಿ ಲೀಲೆಯಿಂದಲೆ ಬಾಲನಟನೆಯನಾಡಿದನೆಂದು ಹೇಳುವನು. ಶಂಕರದಿ ಗ್ವಿಜಯಕಾರನು ಶಂಕರನವಿಷಯಕ್ಕೆ "ಇತಿ ಸಪ್ತಮಹಾಯನೇಖಿಲಶ್ರು ತಿಪಾರಂಗತ ತಾಂಗತೋಬಟುಃ। ಪರಿವೃತ್ಯಗುರೋಃ ಕುಲಾದ್ಗೃಹೇ ಜನ ನೀಂ ಪರ್ಯಚರನ್ಮಹಾಯಶಾಃ॥" ಎಂದು ಏಳನೆಯ ವರ್ಷದಲ್ಲಿಯೆ ನಿಖಿ ಲ ಶ್ರುತಿ ಪಾರಾಂಗತನಾಗಿ ಗುರುಕುಲದಿಂದತಿರುಗಿ ತಾಯಿಯ ಸೇವೆಯ ನ್ನು ಮಾಡುತ್ತ ಮನೆಯಲ್ಲಿದ್ದನೆಂದು ಬರೆದಿರುವನು. ಶಂಕರನು ಶಂಕರ ನವತಾರವೆಂದು ಸ್ಮಾರ್ತರು ಭಾವಿಸುವರು. ಇಂತನೇಕ ಉದಾಹರಣ ಗಳನ್ನು ಹೇಳಬಹುದು.

ಹೀಗೆ ಬಾಲ್ಯವನ್ನು ಕಳೆದ ಅಲ್ಲಮನು ಗುರೂಪಾಸನೆಯಿಂದ್ದ ತತ್ತ್ವಬೋಧವನ್ನು ಹೊಂದುವ ದಾರಿಯನ್ನೂ ಗುರುಲಕ್ಷಣವನ್ನೂ ತೋರಿಸಿದನು. ತಾನು ಲೋಕಗುರುವಾದರು ಗುರುಮಹತ್ವವನ್ನು ಪ್ರಕ

CC-0. Jangamwadi Math Collection. Digitized by eGangotri

ಟಿಸಲಿಕ್ಕೆ ಗುರುಸ್ವರೂಪವಾದ ಗೊಗ್ಗಯ್ಯನನ್ನೂ ಅನಿಮಿಷಯ್ಯನನ್ನೂ ಅಲ್ಲಮನು ಸಾರ್ಥ ಕೃತಾರ್ಥನಾಗಿ ಸ್ತೋತ್ರಮಾಡಿರುವನು. ಲಿಂಗಾಂಗ ಸಾಮರಸ್ಯದಿಂದ ಜೀವ ಭಾವವು ನಷ್ಟವಾದ ಮಹಿಮನು ಶಿವನೆ ಯಲ್ಲದೆ ಮಾನವನಲ್ಲ. ಅವನಲ್ಲಿ ಜಾತ್ಯಾದಿ ಕಲ್ಪನೆಯು ಇಲ್ಲ ಇದೇ ಅಪ್ರಾಕೃತಭಾವವು ಎಂದು ಶಿವಾಗಮಗಳು ಸ್ವರವನ್ನೆತ್ತಿ ಹೇಳುವವು. ಅದೇ ಸನಾತನ ಧರ್ಮವನ್ನು ಅಲ್ಲಮನು ತನ್ನ ವಚನಗಳಲ್ಲಿಯೂ ವರ್ತನದಲ್ಲಿಯೂ ತೋರಿಸಿರುವನು. ಗೊಗ್ಗಯ್ಯನೆಂದರೆ ಬಾಹ್ಯ ದೃಷ್ಟಿಯವರಿಗೆ ಒಕ್ಕಲಿಗನು. ಆದರೆ ಒಕ್ಕಲಿಗನಾದರೇನು ! ಮತ್ತಾರಾದರೇನು ? ಶಿವಕೃಪೆಯಿಂದ ಶರೀರಾದಿ ಪ್ರಕೃತಿಕಾರ್ಯಗಳ ತೊಡಕಿನಿಂದ ಜಾರಿ ನಿಂದ ಜಾಣನೆ ಗುರುವು. ತದನ್ಯನು ಗುರುವಾಗಲಿಕ್ಕೆ ಅನರ್ಹನು–ಶಿವನಿಷ್ಠನಾದ ಆಚಾರ್ಯನಲ್ಲಿ ಪ್ರಾಕೃತಜನಕ್ಕೆ ಉಚಿತವಾದ ಜಾತ್ಯಾದಿಗಳನ್ನು ಎಣಿಸಿದರೆ ಮಹಾದೋಷವೆಂದು ಆಗಮವಚನಗಳುಂಟು—ಗುರುಕೃತದೀಕ್ಷೆಯಿಂದ ಜಾತ್ಯಾದಿ ಪ್ರಾಕೃತಧರ್ಮಂಗಳಳಿದು ಶಿವರೂಪತ್ವವನ್ನೆ ಹೊಂದುವರೆಂಬು ಶಿವವಾಕ್ಯವಿದೆ. ಸೂಕ್ಷ್ಮಾಗಮದ ಪಂಚಮ ಪಟಲದಲ್ಲಿ, ಗುರುಲಕ್ಷಣಗಳನ್ನು ಹೇಳಿದೆ; ಅದರಲ್ಲಿ ಜಾತಿಯು ಹೇಳಲ್ಪಟ್ಟಿಲ್ಲ–ದೀಕ್ಷೆಯಿಂದ ಜಾತಿಯು ದಹನವಾಗುತ್ತದೆಂದ ಬಳಿಕ ಜಾತಿಯನ್ನು ಹೇಳುವ ಪ್ರಸಂಗವೆ ಇಲ್ಲ. ಅದಕ್ಕೆ ಅವಕಾಶವೆ ಇಲ್ಲ ನೀನು ಲಿಂಗಸ್ವರೂಪನು ಜೀವನಲ್ಲ! ಎಂದು ಬೋಧಿಸಿ ಶಿಷ್ಯನ ಜ್ಯಾಡ್ಯವನ್ನು ಪರಿಹರಿಸುವ ಗುರುವಿನಲ್ಲಿ ಜಾತ್ಯಾದಿಗಳಿರಬಲ್ಲುವೊ? ಅಂಧಕಾರವನ್ನು ತೊಲಗಿಸುವ ಪ್ರಕಾಶದಲ್ಲಿ ಅಂಧಕಾರವು ಸಿಗಬಹುದೊ! ನೋಡು—" ನಾನಾವಿಧಾನಿ ಕಾಷ್ಠಾನಿ ವಹ್ನಿಯೋಗಾದ್ಯಥೈಕತಾಂ। ತಥಾನೇಕವಿಧಾ ಮರ್ತ್ಯಾ ಗುರುತಃ ಶಿವತಾಮಿಯುಃ " ಹಲವುತೆರನಾದ ಕಟ್ಟಿಗೆಗಳು ಬೆಂಕಿಯನ್ನು ತಾಗಿ ಹೇಗೆ ಬೆಂಕಿಯೆ ಆಗುವವೊ ಅಂತೆಯೆ ಹಲವುತೆರನಾದ ಮನುಜರು—ಬ್ರಾಹ್ಮಣಾದಿಗಳೆಂಬ ಹಲವುತೆರನಾದವರೂ—ಗುರುವಿನದೆಸೆಯಿಂದ ಶಿವರೂಪವನ್ನೆ ಹೊಂದುವರು. ಈ ಆಗಮ ವಾಕ್ಯವನ್ನೆ ಶ್ರೀ ಶಿವಯೋಗಿಯು ಸಿದ್ಧಾಂತ ಶಿಖಾಮಣಿಯಲ್ಲಿ ಹತ್ತನೆಯ ಪರಿಚ್ಛೇದದಲ್ಲಿ " ಶಿವಸಂಸ್ಕಾರಯುಕ್ತೇಷು ಜಾತಿಭೇದೋನವಿದ್ಯತೇ। ಕಾಷ್ಠೇಷು ವಹ್ನಿದಗ್ಧೇಷು ಯಥಾರೂಪಂ ನವಿದ್ಯತೇ। ತಸ್ಮಾತ್ಸರ್ವ ಪ್ರಯತ್ನೇನ ಶಿವಸಂಸ್ಕಾರ ಸಂಯುತಃ। ಜಾತಿಭೇದಂ ನಕುರ್ವೀತ ಶಿವಭಕ್ತೇ ಕದಾಚನ " ಬೆಂಕಿಯಿಂದ ಸುಟ್ಟ ಕಟ್ಟಿಗೆಗಳಲ್ಲಿ ಮೊದಲಿನ ರೂಪವು ಹೇಗೆ ಇರುವದಿಲ್ಲವೊ ಅದರಂತೆ ಶಿವಸಂಸ್ಕಾರದಿಂದ ಯುಕ್ತರಾದವರಲ್ಲಿ ಜಾತಿ ಭೇದವಿಲ್ಲ. ಆದುದರಿಂದ ಶಿವದೀಕ್ಷಾಯುತನು ಶಿವಭಕ್ತನಲ್ಲಿ ಎಂದೆಂ

CC-0. Jangamwadi Math Collection. Digitized by eGangotri

ದೂ ಜಾತಿಭೇದವನ್ನು ಮಾಡಲಾಗದು ಎಂದು ಹೇಳಿರುವನು. ಶಿವದೀಕ್ಷಿತನಲ್ಲಿ ಜಾತಿಗಳು ದಗ್ಧವಾಗುತ್ತವೆಂಬುದನ್ನು ಲಕ್ಷ್ಯದಲ್ಲಿಟ್ಟು ಗುರುಲಕ್ಷಣವನ್ನು ಹೇಳುವ ಶಾಸ್ತ್ರವನ್ನು ಪರಿಶೀಲಿಸಿದರೆ ಶಿವಾಚಾರ ಶಿವಜ್ಞಾನ ಶಿವಶಾಸ್ತ್ರ ಪರಿಣತಿಗಳಿಂದ ಗುರುತ್ವವಲ್ಲದೆ ಜಾತಿಯಿಂದಲ್ಲೆಂಬುದು ಸ್ಪಷ್ಟವಾಗಿದೆ "ಸತ್ಕುಲಾಂ ಪ್ರಜಪನ್ ಶಾಂತಃ ಸತ್ಯವಾಗನಹಂಕೃತಃ। ನಿರ್ಮತ್ಸರೋ ನಿರುತ್ಸೇಕಃ ಕಾಮಾದಿ ಗುಣವರ್ಜಿತಃ। ಸ್ವದಾರನಿರತೋ ದಾಂತಃ ಸಮಸ್ತಾಗಮಪಾರಗಃ। ವಾಗ್ಮೀಗಭೀರಃ ಸಂತುಷ್ಟ ಪ್ರಗಲ್ಭಃ ಕರುಣಾಸ್ಪದಃ। ಇತ್ಯಾದಿ ಗುರುವನ್ನು ಮನುಷ್ಯನೆಂದು ತಿಳಿಯಲಾಗದೆಂಬ ಗ್ರಂಥಗಳಿಂದಾದರು ಮನುಷ್ಯತ್ವಗತವಾದ ಖ್ಯಾತ್ಯಾದಿಗಳನ್ನು ಕಲ್ಪಿಸಲಾಗದೆಂದು ಸ್ಪಷ್ಟವಾಗುತ್ತದೆ.

ಇಂತಿವೆಲ್ಲ ತತ್ತ್ವಗಳನ್ನು ವಿವರಿಸಲವತರಿಸಿದ ಅಲ್ಲಮನನ್ನು ಕವಿಗಳು ಹಲವುರೀತಿಯಿಂದ ಕೊಂಡಾಡಿದರು.

ವಾರ್ಧಿಕ

ಮಿಸುಪ ನಿರ್ವಯಲಕಾಯವನಾಂತು ಧರೆಯಪಾ ॥
ಲಿಸಲೆಂದು ಬಂದು ವಸುಮತಿಯೊಳಿಹ ಸದ್ಭಕ್ತ ।
ವಿಸರಮಂ ಪಾವನಂ ಗೆಯ್ದು ನಿಂದೊಡೆ ಪೆಜ್ಜೆ ಸುಳಿದೊಡಂ ನೆಳಲಿಲ್ಲದೆ ॥
ಜಸವೆತ್ತು ಚರಿಸಿ ಸುಜ್ಞಾನಪ್ರಕಾಶದಿಂ ।
ಬಸವ ಮೊದಲಾದ ಶರಣರ ಹೃದಯದಲ್ಲಿರಾ ।
ಜಿಸುವ ನಿರ್ಮಾಯನೆನಿಪಲ್ಲಮಪ್ರಭುರಾಯ ನೊಸೆದು ರಕ್ಷಿಸುವುದೆಂಮನು ॥

—ಶ್ರೀತೋಂಟದ ಸಿದ್ಧೇಶ್ವರ

ಭಾಮಿನಿ

ಅಲ್ಲಮಪ್ರಭುವೆಂಬ ಸಂಯಮಿ ।
ವಲ್ಲಭಂ ಲೋಕಪ್ರಪಂಚಕೆ ।
ದುರ್ಲಭಂ ಚರಲಿಂಗಮೂರ್ತಿ ಸಮುಜ್ವಲಿತಕೀರ್ತಿ ॥
ಬಲ್ಲಹರಬಲ್ಲಹನು ವಿರತೋ ।
ತ್ಫುಲ್ಲಮುಖಕಮಲಂ ಜವಂಗೆದೆ ।
ದಲ್ಲಣನು ಭಯಕರ್ಮಕೃಂತನ ಕರ್ಮಕರ್ಮಠನೂ ।

ಶ್ರೀಭೀಮ

CC-0. Jangamwadi Math Collection. Digitized by eGangotri

ಬಲ್ಲಿತಹ ಹರಿವಿರಿಂಚಾದಿಗಳ ಮುನಿವರರ ।
ಸಲ್ಲಲಿತ ಚಿತ್ತಮಂ ತಲ್ಲಣಂಗೊಳಿಸಿ ಜಗ ।
ವೆಲ್ಲಮಂ ಕೊರಚಾಡಿ ಕಾಡಿಯಾಡಿಪ ಮಾಯಯಾರ್ಪ ನತಿಗಳೆ
ದಾವಗಂ ॥

ಉಲ್ಲಾಸದಿಂದಖಂಡಿತರೂಪನಾಗಿ ಚಿ ।
ದ್ವಲ್ಲಭನೆನಿಸಿ ರಂಜಿಪಲ್ಲಮಪ್ರಭುವರನ ।
ಮೆಲ್ಲಡಿಯ ನೆನೆದ ವಿದ್ಯಾವಲ್ಲರಿಯ ಚಿಲ್ಲವಿತ್ರದಿಂ ಛೇದಿಸುವೆನು ॥

—ಶ್ರೀತೋಂಟದಸಿದ್ಧಲಿಂಗಯತಿ

## ಚಂಪಕಮಾಲೆ

ಪ್ರಭುವೆ ಮಹಾಗುರು ಪ್ರಭುವೆ ಲಿಂಗಕಳಾ ಪ್ರಭುವೇ ಚರಾಭಿಧ ।
ಪ್ರಭುವೆ ಶಿವಾತ್ಮವಿತ್ಪ್ರಭುವೆ ಯೋಗಿವರ ಪ್ರಭುವೇ ಚಿದಂಗನಾ ॥
ಪ್ರಭುವೆ ಸದಾಮಲಪ್ರಭುವೆ ರಕ್ಷಿಸು ದೇವ ಗುಹೇಶ್ವರಾಲ್ಲಮ ।
ಪ್ರಭುವೆ ನಿರಂಜನ ಪ್ರಭುವೆ ಮತ್ಪ್ರಭುವೇ ಪ್ರಭುವೇ ಶಿವಾಧವಾ ॥

—ಶ್ರೀಮಾಯಿದೇವ

## ವಾರ್ಧಿಕ

ನಿರುಪಾಧಿ ನಿಸ್ಸಂಗಿ ನಿರ್ಮಲ ನಿರಾಭಾರಿ ।
ಉರುನಿತ್ಯ ನಿರ್ದೇಹಿ ನಿಸ್ಸೀಮಸುಜ್ಞಾನಿ ।
ವರಭಕ್ತ ಸತ್ಪ್ರಾಣಿ ಸನ್ಮೂರ್ತಿ ಮುಕ್ತಮದ ಮೋಹಾದಿಗುಣವಿ
ರಹಿತಾ
ಭರಿತ ಮಾಯಾದೇಹ ಮಲರಹಿತ ಸಂಚಮಾ ।
ಕ್ಷರಮುಖಪ್ರಣವಾಂಗಪರತತ್ತ್ವವರಿವ ಚಿ ।
ದ್ಧರ ಬಿಟ್ಟಮಂಡೆಯಾ ಪ್ರಭುಜಂಗಮದ ಪಾದಮಿರ್ಕೆನ್ನಹೃದಯ
ದೊಳಗೆ ॥

—ಶ್ರೀಗುಬ್ಬಿಯಮಲ್ಲಣಾರ್ಯ

ನಿರುಪಮನಿರಂಗನೆನಿಪಲ್ಲಮ ಪ್ರಭುರಾಯ ।
ಹರಭಕ್ತರೇಸಂಗಮೇಶರೆಂದೆಂಬಬಸ ।
ವರಸ ವಿಮಲಪ್ರಸಾದಾಂಗಿಯಹ ಚೆನ್ನಬಸವೇಶರಿಂವರರಂಘ್ರಿಕ
ಮಲ ॥

CC-0. Jangamwadi Math Collection. Digitized by eGangotri

ಪರಮಷಟ್ಸ್ಥಲವಾದುವವನುತಿಸುವೆಂ ನುತಿಸಿ ।
ನಿರುತ ಷಟ್ಪದಿಯಾದುವಿವು ಕಮಲಜಾಂಡದೊಳ್ ।
ಪಸಕಲಿಸಿ ಪಸರಿಸುಗೆ ಚರಗುರುಶಿವಾರ್ಚಕರ ಮನಕುತ್ಸವಂ ಬೀರುತೆ ॥

—ಶ್ರೀಗುಬ್ಬಿಯಮಲ್ಲಣಾರ್ಯಕೃತ ಭಾವಚಿಂತಾರತ್ನ

ಜಿತಮಾಯಂ ನಿರಪಾಯನನ್ವಿತಚಿದಂಗಂ ಸದ್ದಯಾಪಾಂಗನೂರ್॥
ಜಿತಶೀಲಂ ಶ್ರುತಿಮೂಲನಾತ್ತ ಶಿವಮಂತ್ರಂ ಪ್ರೋಕ್ತ ತಂತ್ರಂ
ಕುಸಂ ।

ಸ್ಮೃತಿದೂರಂ ಗಣಸಾರನನ್ಯಸಮಯಾಹಂಕಾರಶಂಕಾಹರಂ ।
ಸತತಂ ಮಾಳ್ಕೆಮಗಲ್ಲಮ ಪ್ರಭುವರಂ ವೈರಾಗ್ಯ ಸೌಭಾಗ್ಯಮಂ ॥

—ಶ್ರೀಷಡಕ್ಷರ ದೇವ

ದರ್ಪಣದೊಳೆಸೆವಪ್ರತಿಬಿಂಬದಂತಾಗಸದೊ ।
ಳಿರ್ಪಸುರಚಾಪದಿರವೆಂತಂತೆ ದಗ್ಧಪಟ ।
ತೋರ್ಪಂತೆ ಘನಮರೀಚಿಯ ನಿಲುವಿನಂತಾಲಿವರಲಂತೆ ಮಿಸುಪ॥
ಕರ್ಪೂರಂ ಶಿಖಿಯೊಳಡವೆರದಂತೆ ವಿಶ್ರುತಸಿತ ।
ಸರ್ಪಿಯೊಳಗಣರೂಪಿನಂತಂತೆ ಮೆರೆದು ಕಂ ।
ದರ್ಪನಂ ಸುಟ್ಟತುಳನಿರ್ಮಾಯನಲ್ಲಮಪ್ರಭುರಾಯಸಲಹೆಂಮನು॥

—ಶ್ರೀ ವಿರೂಪಾಕ್ಷ ಪಂಡಿತ

ಶುಭಸಂವಿದ್ವಹ್ನಿಯಿಂದಂ ನಿಖಿಲಕರಣ ಕಾಷ್ಠಂಗಳಂಸುಟ್ಟು ಸಚ್ಚಿತ್ ।
ಪ್ರಭೆಯೇ ತಾನಾಗಿ ತನ್ನಂ ಪರಶಿವನೊಳೊಡಂಗೂಡಿಯಾನಂದರೂಪಾ ।
ದಭವಂ ಭಕ್ತೌಘರತ್ನಾಕರ ಹಿಮಕರನಾಭಕ್ತಹೃತ್ಪದ್ಮಸೂರ್ಯಂ।
ಪ್ರಭುರಾಯಂಶಾಂತಮಾಯಂ ಕುಡುಗನವರತಂ ಶುದ್ಧ ವೈರಾಗ್ಯದೊಳ್ಪಂ॥

—ಶ್ರೀ ಸುರಂಗ

ರೂಪಿಂಗೆರೂಪಾಗಿ ರೂಢಿಯೊಳು ಚರಿಸಿನೀ ।
ರೂಪಿಂಗೆ ನಿಶ್ಶೂನ್ಯ ನಿರ್ಮಾಯನಾಗುತ್ತ ।
ಪಾಪಸಂಸೃತಿತಾಪಶರಧಿ ಕುಂಭಜನೆನಿಸಿ ನೆಲಸಿನಿಜಪುಣ್ಯದಯದಿ।
ಆಪರಮಕಲ್ಯಾಣಪುರದಬಸವೇಶಶಿವ ।
ರೂಪಲಕ್ಷದ ತೊಂಭತಾರು ಸಾವಿರಕೆ ಸ ।
ಲ್ಲಾಪದಿಂ ಪಾಕಗೈದುದನೆಲ್ಲ ಸಲಿಸಿ ಬಸವಂಗೊಲಿದ ಪ್ರಭುವೆಸಲಹು ॥

—ಶ್ರೀ ಸಿದ್ಧಾದೃಶ್ಯಕವಿ.

CC-0. Jangamwadi Math Collection. Digitized by eGangotri

ವಾರ್ಧಿಕ

ನಿಂದಲ್ಲಿ ನೆಳಲಿಲ್ಲ ಸುಳಿಯೆ ಹೆಜ್ಜೆಗಳಿಲ್ಲ ।
ಬಂಧುರ ಮಹಾಲಿಂಗಮುಂ ಕರದ್ಮೊಳಾಂತು ಪ್ರಭು ।
ವೆಂದೆಂಡನೆಯ ತಾನೆ ಕೆರೆಗಟ್ಟ ಗುಡ್ಡದೆಡೆಗೆಯ್ದಿ ಮುದದಿ ॥
ಬಂದುಕೇಳ್ದ ಗುಡ್ಡರಾಮಯ್ಯನೆಲ್ಲಿರ್ಪ ।
ನೆಂದವರು ಗುರುವ ಪಳಿಯುತ್ತಿರ್ಪನೆ ಕ ।
ಲ್ಲಿಂದಡಲು ಬಯಲನಿಟ್ಟಂತಾಗಲಪ ಸಿದ್ಧಪತಿ ಕೇಳಿಯುವರಘನವ ॥

—ಶ್ರೀಚಿಕ್ಕನಂಜಾಚಾರ್ಯ

ಬಸವೇಶಾದಿ ಸರ್ವೆಷಾಂ ಗಣಾನಾಂ ಜ್ಞಾನದಾಯಿನೇ ।
ಯೋಗೀಂದ್ರಾಯನಮಸ್ತಸ್ಮೈ ಪ್ರಭವೇ ಶಿವಮೂರ್ತಯೇ ॥

—ಶ್ರೀನೀಲಕಂಠನಾಥಾಚಾರ್ಯ

ಗಣಾನಾಂಬಸವಾದೀನಾಂ ಸರ್ವೇಷಾಂಜ್ಞಾನದಾಯಿನೇ ।
ಯೋಗೀಂದ್ರಾಯನಮಸ್ತಸ್ಮೈ ಪ್ರಭವೇಶಿವಮೂರ್ತಯೇ ॥

ಶ್ರೀವೀರಶೈವಪ್ರದೀಪಿಕಾಯಾಂ ಶ್ರೀತೋಂಟದಾರ್ಯ:

ಆದ್ಯಂತ ಶೂನ್ಯಮಮಲಂ ಸದಾನಂದಮಯಃ ಪ್ರಭುಃ ।
ಅನಾದಿಜಂಗಮೋದೇವಿ ಬ್ರಹ್ಮವಿಷ್ಣ್ವಿಂದ್ರ ಪೂಜಿತಃ ॥

—ಅನಾದಿವೀರಶೈವ ಸಂಗ್ರಹೇ ಶ್ರೀಸಿದ್ಧವೀರಾರ್ಯ

ಪ್ರಾಣಲಿಂಗೈಕ್ಯವಿಜ್ಞಾನರಹಸ್ಯಂ ಯೇನ ದರ್ಶಿತಂ ।
ಜಗದ್ಧಿತಾರ್ಥಂ ತಸ್ಮೈ ಮತ್ಪ್ರಭುವೇ ಪ್ರಭವೇನಮಃ ॥

—ಶ್ರೀಗುರುರಾಜಃ

ಚೇತಸ್ಯಾಕಲಯಾಮಿತಂ ಪ್ರಭುವರಂ ಶೈವಾಧ್ವನೀನಶ್ರಮ ।
ಸ್ತೋಮೋನ್ಮೂಲನ ದಿವ್ಯಚಿತ್ಸುಖ ಸುಧಾಧಾರಾ ಪ್ರಪಾಯತ್ತನುಂ ॥
ಮುಕ್ತ್ಯಧ್ವಪ್ರತಿಕೂಲದುರ್ಮತತಮಃ ಸ್ತೋಮಾಪಹಾವಿ
ರ್ಭವದ್ ।
ರಾಕಾಚಂದ್ರಮಸಂಯದಲ್ಲಮಪದಖ್ಯಾತಂ ಗುರೂಣಾಂ ಗುರುಂ ॥

—ಶ್ರೀಮಾನಪ್ಪ ವಿಧ್ವಾನ್

——:o:——

ಇಂತೆಂಬಲ್ಲಿ ಪ್ರಥಮ ಪ್ರಕರಣವು ಮುಗಿದುದು.

CC-0. Jangamwadi Math Collection. Digitized by eGangotri

# ಎರಡನೆಯ ಅಧ್ಯಾಯವು

:o:

## ಜಗದ್ಗುರು ಪ್ರಕರಣವು

ಮಾಯಾಮೋಹದೆ ಬೀಳ್ವ ಸಂಸೃತಿ ಮಹಾ ಘೋರಾಟವೀ ಮಧ್ಯದೋ।
ಳಾಯಾಸಂಬಡುತಿರ್ಪ ಮರ್ತ್ಯರ ಶಿವಜ್ಞಾನಾಧ್ವದಿಂ ದಾಂಟಿಸಲ್॥
ಕಾಯಂಬೆತ್ತು ಶಿವಂ ಕೃಪಾಭರದಿನಾ ಚಾರಾದಿಲಿಂಗಂಗಳಾ।
ಮ್ನಾಯಾಂತೋಕ್ತಿಗಳಿಂದೆ ಭಕ್ತರೊಳಿ ತೋರ್ದ್ವಾಚಾರ್ಯನೇ ಅಲ್ಲಮಂ॥

## ಜಗದ್ಗುರು ಶಬ್ದ ನಿರ್ವಚನ

ಜಗದ್ಗುರು ಶಬ್ದವು ಜಗತ್ ಮತ್ತು ಗುರು ಶಬ್ದಗಳ ಷಷ್ಠೀತತ್ಪುರುಷ ಸಮಾಸವಾಗಿದೆ. ಜಗತೋ ಗುರುಃ ಜಗತ್ತಿನ ಗುರುವು ಜಗದ್ಗುರುವು. ಜಗಚ್ಛಬ್ದವು ಗಮ ಧಾತುವಿಗೆ "ಭ್ರಾಜಭಾಸಧುರ್ವಿದ್ಯುತೋರ್ಜಿಪೃಜುಗ್ರಾವಸ್ತುವಃಕ್ವಿಪ್" ಎಂಬ ಸೂತ್ರದಲ್ಲಿ ಹೇಳಿದ ಕ್ವಿಪ್ ಪ್ರತ್ಯಯವು "ಅನ್ಯೇಭ್ಯೋಽಪಿದೃಶ್ಯತೇ" ಎಂಬ ಮುಂದಿನ ಸೂತ್ರದಿಂದ ಹತ್ತಲಾಗಿ "ದ್ಯುತಿಗಮಿಜುಹೋತೀನಾಂ ದ್ವೇಚ" ಎಂಬ ವಾರ್ತಿಕದಿಂದ ಅಭ್ಯಸ್ತ ಸಂಜ್ಞೆಯೂ "ಗಮಃಕ್ವೌಚ" ಎಂಬ ಸೂತ್ರದಿಂದ ತಕಾರಾಗಮವೂ ಉಂಟಾಗಿ ನಿಷ್ಪನ್ನವಾಗಿದೆ. ಆದುದರಿಂದ ಜಗತ್ತೆಂದರೆ ಹುಟ್ಟವಣ ಬದುಕುವಣ ಸಾಯುವಣ ಎಂಬ ಸಂಸಾರ ಗತಿಯುಳ್ಳದು. "ಕೃಗ್ರೋರುಚ್ಚ" ಎಂಬ ಸೂತ್ರದಿಂದ, ಗೃ ಧಾತುವಿಗೆ ಕು ಪ್ರತ್ಯಯವು ಹೊಂದಿ ಗುರುಶಬ್ದವಾಗಿದೆ. ಗೃ ಧಾತುವು ಶಬ್ದದಿಂದ ಬೋಧಿಸುವಲ್ಲಿ ವರ್ತಿಸುತ್ತದೆ ಗುರುವೆಂದರೆ ತನ್ನ ವಾಕ್ಯಗಳಿಂದ ಶಿಷ್ಯರ ಅಜ್ಞಾನಾಂಧಕಾರವನ್ನು ದೂರಮಾಡುವನೆಂಬರ್ಥ. "ಸಂಗಿರತ್ಯಖಿಲಂ ತತ್ತ್ವಂ ಶಿಷ್ಯಾಯ ಪರಮಾರ್ಥತಃ। ಅತೋಗುರುರಿತಿಪ್ರೋಕ್ತಃ" ಸೂಕ್ಷ್ಮಾಗಮ. ಜಗದ್ಗುರುವೆಂದರೆ ಸತ್ತು ಹುಟ್ಟುವ ಸಂಸಾರದಲ್ಲಿ ತೊಳಲುವ ಜೀವರನ್ನು ಜ್ಞಾನಬೋಧಕವಾಕ್ಯಗಳಿಂದುದ್ಧರಿಸುವನು. ಈ ಲಕ್ಷಣವು ಅಲ್ಲಮನಲ್ಲಿ ಅನ್ವಯಿಸುತ್ತದೆ.

## ವೀರಶೈವಕ್ಕೂ ಮತಾಂತರಗಳಿಗೂ ಅಂತರವು.

ವೀರಶೈವಮತವು ಬಲು ಉದಾತ್ತವಾದುದು. ಅದರಲ್ಲಿ ಕೃತ್ರಿಮಂಗಳಾದ ಭೇದಗಳಿಲ್ಲ. ಶಿವನಲ್ಲಿ ಅನನ್ಯವಾದ ಭಕ್ತಿಯೂ ಮುಕ್ತಿಯ ಬಯಕೆಯೂ ಉಳ್ಳ ಪ್ರತಿಯೊಬ್ಬನೂ [illegible] ಮೋ

CC-0. Jangamwadi Math Collection. Digitized by eGangotri

ಕ್ಷ ಲಕ್ಷ್ಮಿಯು ಅವನ ಕೈವಶವಪ್ಪಂತೆ ವೀರಶೈವವು ಮಾಡಲಪ್ಪುದು. 'ಯೇಷು ಯೇಷು ಮಹಾದೇವಿ ಭಕ್ತಿರವ್ಯಭಿಚಾರಿಣೀ। ಯೋಗ್ಯಾಸ್ತ ಏವ ಮಂತ್ರಸ್ಯ ಭಕ್ತಿರೇವಾತ್ರ ಕಾರಣಂ॥ ಸೂ. ಕಾ. ಎಲೌ ಮಹಾದೇವಿ! ಆರಾರಲ್ಲಿ ಭಕ್ತಿಯು ಒಂದುಗೂಡಿರುವುದೊ ಅವರವರು ಈ ಷಡಕ್ಷರ ಮಂತ್ರಬೋಧವನ್ನು ಹೊಂದಲು ಅಧಿಕಾರವುಳ್ಳವರು. ಭಕ್ತಿಯೊಂದೇ ಅಧಿಕಾರಕ್ಕೆ ಕಾರಣವು

ಅನಾದಿವೇದಕಾಲದಲ್ಲಾದರೂ ಭಕ್ತಿಯೆ ಜ್ಞಾನಕ್ಕೆ ಅಧಿಕಾರವೆನಿಸು ತ್ತಿತ್ತು. ಛಾಂದೋಗ್ಯದಲ್ಲಿ ಸತ್ಯಕಾಮಜಾಬಾಲನ ಕಥೆಯು ಇದಕ್ಕೆ ನಿದ ರ್ಶನವಾಗಿದೆ. ಸತ್ಯಕಾಮನು ಜಬಾಲೆಯ ಮಗನು. ಅವನ ತಾಯಿಗೆ ಪತಿಯ ಗೋತ್ರವು ಗೊತ್ತಿರಲಿಲ್ಲ. ಸತ್ಯಕಾಮನು ಬಾಲ್ಯವನ್ನು ಕಳೆ ದ ಬಳಿಕ ಜ್ಞಾನಾರ್ಜನವನ್ನು ಮಾಡಬೇಕೆಂದು ಮನಸು ಮಾಡಿದನು. ಜ್ಞಾನಾರ್ಜನಕ್ಕಾಗಿ ಗುರುವಿನಬಳಿಗೆ ಹೋಗಬೇಕಾಯ್ತು. ಗುರುಗಳು ತನ್ನ ಗೃಹ್ಯವಿದ್ಯಮಾನಗಳನ್ನು ವಿಚಾರಿಸಿದರೆ ಏನು ಹೇಳಬೇಕೆಂದು ತನ್ನ ತಾಯಿಯನ್ನು ಗೋತ್ರವ ಬೆಸಗೊಂಡನು. ಆಕೆಯು ತನಗದು ತಿಳಿಯದೆಂದು ಹೇಳಿದಳು. ಸತ್ಯಕಾಮನು ನಿರಾಶನಾಗಲಿಲ್ಲ. ಸತ್ಯದಿಂದ ಕಾರ್ಯವನ್ನು ಸಾಧಿಸುವೆನೆಂದು ಬಗೆದನು. ಅವನು ಹರಿದ್ರುಮಂತನ ಮಗನಾದ ಗೌತಮನ ಬಳಿ ಸಾರಿದನು. ಗುರುವೆ! ತಂಮಲ್ಲಿ ಅಧ್ಯಯನವ ನ್ನು ಮಾಡಬೇಕೆಂದಿರುವೆನು. ಸನ್ನಿಧಿಯಲ್ಲಿರಲಿಕ್ಕೆ ಅನುಮತಿಯನ್ನೀಯ ಬೇಕು ಎಂದು ಬೇಡಿಕೊಂಡನು. ಆದಕ್ಕೆ ಗೌತಮನು ತಂಮಾ ನೀನಾ ವಗೋತ್ರದವನು? ಎಂದು ಬೆಸಗೊಂಡನು. ಸತ್ಯಕಾಮನು ಬುದ್ಧಿ! ನಾನಾವಗೋತ್ರದವನೆಂದು ತಿಳಿಯೆನು. ನನ್ನ ತಾಯಿಯನ್ನು ಕೇಳಿದೆನು. ಆಕೆಯು ತನಗದು ತಿಳಿಯದೆಂದು ಹೇಳಿದಳು. ನನ್ನ ತಾಯ ಹೆಸರು ಜಬಾಲೆಯು. ನನ್ನ ಹೆಸರು ಸತ್ಯಕಾಮನು. ಆದುದರಿಂದ ನಾನು ಸತ್ಯಕಾ ಮಜಾಬಾಲನಿರುವೆನು ಎಂದು ಹೇಳಿದನು. ಗುರುವಿಗೆ ಗುರುತರವಾದ ಹರ್ಷವಾಯ್ತು. ಸತ್ಯಕಾಮನು ನಾಮದಿಂದಲೆ ಅಲ್ಲ, ನಿಜವಾಗಿಯು ಸತ್ಯಕಾಮನಾಗಿದ್ದನು. ಸತ್ಯದಲ್ಲಿ ಅವನ ಆಸಕ್ತಿಯನ್ನುಕಂಡು ಗುಣ ದಿಂದ ಇವನು ಬ್ರಾಹ್ಮಣನೆಂದು ಗೌತಮನು ಗುರುತಿಸಿದನು. ಸತ್ಯ ಕಾಮನನ್ನು ಕುರಿತು ತಂಮಾ ಬ್ರಾಹ್ಮಣನಲ್ಲದವನು ಈ ಸತ್ಯವಚನವನ್ನು ನುಡಿಯುತ್ತಿರಲಿಲ್ಲ. ನೀನು ಬ್ರಾಹ್ಮಣನಿರುವಿ, ನಿನ್ನ ಉಪನಯನವನ್ನು ಮಾಡುತ್ತೇನೆ. ಸಂಸ್ಕಾರಕ್ಕಾಗಿ ಹೋಮವನ್ನು ಮಾಡಲಿಕ್ಕೆ ಸಮಿತ್ತುಗ ಳನ್ನು ತಕ್ಕೊಂಡುಬಾ ಎಂದನು. ಸತ್ಯಕಾಮನನ್ನು ಶಿಷ್ಯನನ್ನಾಗಿ ಅಂಗೀ ಕರಿಸಿದನು.

CC-0. Jangamwadi Math Collection. Digitized by eGangotri

LIBRARY
Jangamawadi Math, Varanasi
Acc. No. 561



ವೀರಶೈವ ಸಂಪ್ರದಾಯದಲ್ಲಿ ಸ್ತ್ರೀಯರು ಧರ್ಮವಿದ್ಯೆಗೆ ಅಧಿಕಾರಿಗಳಾಗಿರುವರು. “ನಸ್ತ್ರೀಬಾಲಾದಿಕಲ್ಪನಾ । ನಜನ್ಮಮರಣಾಶೌಚಂ।” ಪಾರಮೇಶ್ವರ. ಈ ಮತದ ಅಧಿಕಾರಿತ್ವಕ್ಕೆ ಸ್ತ್ರೀಬಾಲರೆಂಬ ಮುಂತಾದ ಭಾವಗಳು ತಡೆಯಾಗಲಾರವು. ಈ ಮತಾನುಷ್ಠಾನಕ್ಕೆ ಜನ್ಮಮರಣಗಳ ಅಶೌಚವು ಅಡ್ಡಿಯಾಗದು ವೀರಶೈವನಿಗೆ ಅಂತಪ್ಪ ಅಶೌಚಗಳಿಲ್ಲ. ಉಪನಿಷತ್ತುಗಳಲ್ಲಾದರೂ ಬ್ರಹ್ಮವಿದುಷಿಯರನೇಕರು ಪುರುಷರ ಯೋಗ್ಯತೆಯವರಿರುವರು. ಗಾರ್ಗೀ, ವಾಚಕ್ನವೀ, ಮೈತ್ರೇಯಿ, ಮುಂತಾದವರು ಪ್ರಸಿದ್ಧರಿರುವರು. ಸಂಹಿತಾಕಾಲದಲ್ಲಿ, ಇಲಾ, ಲೋಪಾಮುದ್ರಾ ಮೊದಲಾದವರೂ ರೋಮಶಾ ಮೊದಲಾದವರೂ ಹೆಸರುವಾಸಿಗಳಾಗಿರುವರು.

ರಾಮಾಯಣಕಾಲದಲ್ಲಾದರು “ಪಠನ್‌ದ್ವಿಜೋವಾಗೃಷಭತ್ವಮೀಯಾತ್‌ಸ್ಯಾತ್ಕ್ಷತ್ರಿಯೋ ಭೂಮಿಪತಿತ್ವಮೀಯಾತ್ । ವಣಿಗ್ಜನಃಪಣ್ಯಫಲತ್ವಮೀಯಾಜ್ಜನಶ್ಚಶೂದ್ರೋಪಿಮಹತ್ತ್ವಮೀಯಾತ್” ಎಂಬೀರಾಮಾಯಣಪ್ರಮಾಣದಿಂದ ಶೂದ್ರನು ವಿದ್ಯಾಧಿಕಾರಿಯಾಗಿದ್ದನು.

ಬರಬರುತ್ತ ಇದೆಲ್ಲ ಪಲ್ಲಟಿಸಿತು. ಸ್ತ್ರೀಶೂದ್ರರು ವಿದ್ಯೆಗೆ ತಕ್ಕವರಲ್ಲೆಂಬ ಪರಿಪಾಟಿಯು ಬಂದಿತು. ಜಗತ್ತೆ ಮಿಥ್ಯೆಯೆಂಬ ಅದ್ವೈತಗುರುವಾದ ಶಂಕರಾಚಾರ್ಯರು ದ್ವಿಜರಷ್ಟೆ ಬ್ರಹ್ಮವಿದ್ಯಾಧಿಕಾರಿಗಳೆಂತಲೂ ಅದರಲ್ಲು ಬ್ರಹ್ಮನಿಷ್ಠತ್ವವೆಂಬ ಜೀವನ್ಮುಕ್ತಿಯು ಸನ್ಯಾಸಿಗಷ್ಟೆ ಸಾಧ್ಯವೆಂದೂ ಸನ್ಯಾಸಕ್ಕೆ ದ್ವಿಜರಲ್ಲಿ ಬ್ರಾಹ್ಮಣನೋರ್ವನೆ ಅಧಿಕಾರಿಯೆಂದೂ ಬರೆದಿರುವರು.

ಲಿಂಗಾಯತ ಅಥವಾ ವೀರಶೈವ ಧರ್ಮದಲ್ಲಿ ಮಾತ್ರ ಈ ಸಮೃದ್ಧಿಯು ಹ್ರಾಸವಾಗಲಿಲ್ಲ. ಬ್ರಾಹ್ಮಣಾದಿ ಪ್ರಾಕೃತಧರ್ಮಾವಲಂಬಿಗಳಿಗೆ ಇದು ಸರಿಬರಲಿಲ್ಲ. ವೀರಶೈವವನ್ನಾಚರಿಸುವವರು ಸುಲಭರಾಗಿದ್ದಿಲ್ಲ. ಬಹುಜನವು ಪ್ರಾಕೃತಧರ್ಮಾವಲಂಬಿಯಾಗಿತ್ತು. ಆದರು ಅಲ್ಲಿಗೊಬ್ಬನು ಇಲ್ಲಿಗೊಬ್ಬನು ಅಂದೊಬ್ಬನು ಇಂದೊಬ್ಬನು ಶರಣನು ದಿಟ್ಟತನದಿಂದ ಈ ಧರ್ಮವನ್ನು ಕಾಪಾಡುತ್ತಿದ್ದನೆಂಬುದು ಆಗಮಂಗಳ ಅತ್ಯಲ್ಪ ಭಾಗದಲ್ಲಿ ವೀರಶೈವತತ್ತ್ವಗಳು ಉಪಲಭಿಸುವದರಿಂದ ಸಿದ್ಧವಾಗುತ್ತದೆ.

## ಅಲ್ಲಮನಜಗದ್ಗುರುತ್ವ.

ವೀರಶೈವ ಸಿದ್ಧಾಂತದ ಈ ರಹಸ್ಯಕ್ಕನುಸರಿಸಿ ಅಲ್ಲಮನು ಮುಮುಕ್ಷುಗಳಿಗೆ ಲಿಂಗಾಂಗ ಸಾಮರಸ್ಯರಹಸ್ಯವನ್ನು ಬೋಧಿಸುತ್ತ ಪರ್ಯಟನಗೈಯ್ದನು. ಈಗಿನ ನವ್ಯ ರಾಜ ಜಂಗಮಮೂರ್ತಿಗಳಂತೆ ಶ್ರೀಮದಲ್ಲಮನ

CC-0. Jangamwadi Math Collection. Digitized by eGangotri

ಸಂಚಾರವಿದ್ದಿಲ್ಲ. ಬೆಳ್ಳಿಯ ಕಾಲಾಳುಗಳೂ, ಪಲ್ಲಕ್ಕಿಗಳೂ ಆನೆಬಂಟಿಗಳೂ ಆ ಮಹಿಮನಲ್ಲೀಲಿಲ್ಲ. ತನ್ನ ಬಳಿ ಸಾರಿದವರನ್ನು ಸಂಸಾರ ಸಾಗರದಿಂದ ದಾಟಿಸುವನೆಂಬ ಕೀರ್ತಿಯು ಪ್ರಭುವಿನ ಕಾಲಾಳಾಗಿ ಅವನ ಆಗಮನವನ್ನು ಭಕ್ತರಿಗೆ ಸಾರಿಹೇಳಿ ಅವನೆಂದು ಬರುವನೋ ಎಂಬ ಕುತೂಹಲವನ್ನುಂ ಮಾಡುತ್ತಿತ್ತು. ಭಕ್ತರ ಭಾವವೆ ಆತನ ಪಲ್ಲಕ್ಕಿಯು, ಪರಸಮಯಗಳನ್ನು ಗಣನೆಗೆಯ್ಯದ ಶಿವಾನುಭವದ ಏಕಚ್ಛಲವೆ ಅವನ ಆನೆಬಂಟಿಗಳು, ಆತನ ಪ್ರಸಾದವನ್ನು ಪಡೆಯಬೇಕೆಂಬ ಲಾಲಸೆಯು ಭಕ್ತರನ್ನು ಚರಣದ ಮೇಲ್ಗೆಡಹಿ ಕರಣತ್ರಯವನ್ನೂ ಅವನಿಗೆ ಒಪ್ಪಗೊಳಿಸುತ್ತಿದ್ದಿತು. ಇದೀಗ ಆತನ ಸಂಚಾರದ ವಚನವು “ ಕಾಲಿಲ್ಲದ ಗಮನ, ಕೈಯಿಲ್ಲದ ಸೋಂಕು, ಬಾಯಿಲ್ಲದ ರುಚಿ, ಭಾವವೆ ಕರ್ಪೂರವಾಗಿ ಪರಮ ದೇಹಿಯೆಂದು ಬೇಡುವ ಪರಮನ ತೋರಾ ಗುಹೇಶ್ವರ ” ಜಗತ್ತಿನಲ್ಲಿ ಪ್ರಾಣಗಳು ಒಂದಾನೊಂದು ಬಯಕೆಯಿಂದ ಆ ಬಯಕೆಯನ್ನು ಪೂರಯಿಸಲಿಕ್ಕೆಂದು ಸಂಚರಿಸಿ ತೊಳಲುವರು. ಶಿವಜ್ಞಾನದಿಂದ ವೈರಾಗ್ಯವಿಂಬುಗೊಂಡ ಮಹಿಮನು ಜಗತ್ತಿನ ಜೀವವನ್ನು ದುಃಖದಿಂದ ಬಿಡಿಸುವುದೊಂದೆಯೊಂದು ನಿಮಿತ್ತದಿಂದ ಸಂಚರಿಸುವನು. ಆದೆ ಕಾಲಿಲ್ಲದ ಗಮನ-ಅಂದರೆ ಗಾಳಿಯು ಹೇಗೆ ಬೇಕಾದತ್ತ ಬೀಸುತ್ತ ಜನಕ್ಕೆ ಪ್ರಾಣಪ್ರದವಾಗುವುದೊ ಅದರಂತೆ ಸುತ್ತೆಲ್ಲ ಸುಳಿದು ಸಂಸಾರಸಂತಪ್ತರನ್ನು ಶಾಂತರನ್ನಾಗಿ ಮಾಡುವನು. ಸಂಸೃತಿ ಜೀವನು ದುರಾಶಾಬದ್ಧನಾಗಿ ವಿಷಯಗಳ ಸಂಗ್ರಹದಲ್ಲಿಯೆ ತೊಡಗಿರುವನು. ಶಿವಜ್ಞಾನದಿಂದಾದ ಲಿಂಗಸಾಕ್ಷಾತ್ಕಾರದ ಬಲುಮೆಯಿಂದ ವಿರತಿಯೆಡೆಗೊಂಡ ಶಿವಯೋಗಿಯು ಅಪ್ಪದಾನೊಂದು ಒಡವೆಯನ್ನು ಸಂಗ್ರಹಿಸಲರಿಯದೆ ತನ್ನ ಸೋಂಕಿನಿಂದ ಪವಿತ್ರಿತವಾದ ಪ್ರಸಾದವನ್ನು ಹಾರಯಿಸುವ ಭಕ್ತರಿಗಾಗಿ ಅವರರ್ಪಿಸುವ ಪದಾರ್ಥಗಳನ್ನು ಕೈಮುಟ್ಟವುದರಿಂದ ಕೈಯಿಲ್ಲದ ಸೋಂಕು. ಜಿಹ್ವಾಲಂಪಟರಾದ ಜನರು ಪದಾರ್ಥಗಳನ್ನು ರುಚಿಸುವಲ್ಲಿಯೆ ಸುಖವನ್ನೆಣಿಸುವರು. ಆದರೆ ಶಿವಜ್ಞಾನಿಯು ಪದಾರ್ಥಗಳ ಮರೆಯಲ್ಲಿ ಗೂಢವಾದ ಪ್ರಸಾದದ ಆಸ್ವಾದನವನ್ನು ತಿಳಿದವನಾದುದರಿಂದ ಷಡ್ರುಚಿಗಳಲ್ಲಿ ಲೋಲುಪನಾಗದೆ ಪದಾರ್ಥಗಳನ್ನು ಪರಿಗ್ರಹಿಸಿ ಜಂಗಮ ಪ್ರಸಾದವನ್ನು ದಯಪಾಲಿಸುವನಾದುದರಿಂದ ಬಾಯಿಲ್ಲದ ರುಚಿಯನುಣ್ಣುನು. ಆಶಾದರಿದ್ರನಾದ ಭಿಕ್ಷುವು ಭಿಕ್ಷಾಪಾತ್ರವನ್ನು ಹಿಡಿದು ದುರಾಶೆಯು ತುಂಬದೆ ಕಂಡಕಂಡವರನ್ನೆಲ್ಲ ಕಂಡ ಕಂಡ ನೆವದಿಂದ ಬೇಡುತ್ತ ತಿರುಗುವನು. ಆದರೆ ಶಿವಭಾವಭರಿತನು ತನ್ನ ಸುಭಾವವನ್ನೆ ಭಿಕ್ಷಾಪಾತ್ರವನ್ನಾಗಿಸಿ ಭಕ್ತರ ಭಕ್ತಿ ಭಿಕ್ಷೆಯನ್ನೆ ತುಂಬುತ್ತ ನಡೆವನು. ಅಂತಪ್ಪ ಪರಮಯೋಗಿಯನ್ನು ತೋರಿಸು ಎನ್ನ ಹೃದಯವಾಸಿಯಾದ ಗುಹೇಶ್ವರನೇ!

CC-0. Jangamwadi Math Collection. Digitized by eGangotri

ಪರಮವಿರಾಗಿಯಾದ ಅಲ್ಲಮನು ದೇಶಗಳನ್ನು ಸಂಚರಿಸುತ್ತ ಮು ಕ್ತಾಯಕ್ಕ ಮಹಾದೇವಿಯಕ್ಕ ಮೊದಲಾದ ಶಿವಶರಣೆಯರನ್ನೂ ಬಸವಾದಿ ಶರಣರನ್ನೂ ಬೋಧಿಸಿದನು. ಅಧಿಕಾರಿಗಳಲ್ಲಿ ಆತನು ಹೋರೆಯ ದೆಸೆ ಯಿಂದಾಗಲಿ ಹೆಂಗಳೆಯರಿಂದಾಗಲಿ ಭೇದವನ್ನು ಮಾಡಲಿಲ್ಲ. ಅವರವರ ಹೋರೆಯಲ್ಲಿ ಸುಲಭವಾಗಿದ್ದ ಸಾಮ್ಯಗಳಿಂದ ಎಲ್ಲರನ್ನೂ ಬೋಧಿಸಿದನು. ಇದು ನೋಡಿ ಒಕ್ಕಲಿಗನಾದ ಗೊಗ್ಗಯ್ಯನನ್ನು ಬೋಧಿಸಿದ ವಚನವು! "ತನುವ ತೋಟವ ಮಾಡಿ, ಮನವ ಗುದ್ದಲಿಯ ಮಾಡಿ, ಅಗದು ಕಳೆದೆ ನಯ್ಯಾ ಭ್ರಾಂತಿಯ ಬೇರ, ಒಡೆದು ಸಂಸಾರ ಹೆಂಟೆಯ, ಬಗೆದು ಬಿತ್ತಿದೆ ನಯ್ಯ ಬ್ರಹ್ಮಬೀಜವ. ಅಖಂಡಮಂಡಲವೆಂಬ ಬಾವಿ, ಪವನವೆ ರಾಟಾಳ, ಸುಷುಮ್ನದಿಂದುದಕವ ತಿದ್ದಿ ಬಸವಯ್ಯಗಳು ಹಸಗೆಡಿಸಿಹವೆಂದು ಸಮತೆ ಸೈರಣೆ ಎಂಬ ಬೇಲಿಯನಿಕ್ಕಿ, ಆವಾಗಲು ಈ ತೋಟವಲ್ಲಿರ್ದು ಸಸಿಯ ಸಲ ಹಿದೆನು ಕಾಣ ಗುಹೇಶ್ವರ" ಮನುಷ್ಯಜನ್ಮವು ದುರ್ಲಭವಾದುದು. ಕರ್ಮ ಪರಿಪಾಕದಿಂದ ದೇವತಿರ್ಯಙ್ಮನುಷ್ಯಾದಿ ಜನ್ಮಗಳು ೮೪ ಲಕ್ಷಗಳುಂಟು. "ದೇವಾಃ ಷೋಡಶ ಲಕ್ಷಾಣಿ ನವಲಕ್ಷಾಣಿಮಾನುಷಾಃ| ದಶಭಿರ್ದಶಭಿಸ್ತ್ವ ದ್ವಜ್ಜಲಜಾ ವಿಹಗಾಮೃಗಾಃ॥ ಸರೀಸೃಪಾಸ್ತು ಲಕ್ಷಾಣಿ ಏಕಾದಶ ಚರೇ ತರಾಃ॥ ಅಷ್ಟಾಣಿ ದಶಲಕ್ಷಾ ಸಪ್ತಜನ್ಮ ನ್ಯಾಸೂನಿವೈ॥" ಎಂಬ ಪ್ರಮಾ ಣದಿಂದ ದೇವತೆಗಳು, ಮನುಷ್ಯರು, ಜಲಪ್ರಾಣಿಗಳು, ಪಕ್ಷಿಗಳು, ಮೃಗ ಗಳು, ಸರ್ಪಗಳು, ಮತ್ತು ವೃಕ್ಷಾದಿಸ್ಥಾವರಗಳು ಇಂತೆಂದು ಜೀವನಿಗೆ ಏಳು ಜನ್ಮಗಳುಂಟು ಅನುಕ್ರಮದಿಂದ ಹದಿನಾರು ಲಕ್ಷ ಜನ್ಮಗಳು ದೇವ ತೆಗಳಲ್ಲಿ, ಮನುಷ್ಯರಲ್ಲಿ ಒಂಭತ್ತು ಲಕ್ಷ ಜನ್ಮಗಳು, ಮತ್ಸ್ಯಾದಿ ಜಲಚರಗ ಳಲ್ಲಿ ಹತ್ತು ಲಕ್ಷ ಜನ್ಮಗಳು, ಪಕ್ಷಿಗಳಲ್ಲಿ ಹತ್ತು ಲಕ್ಷಗಳು, ಮೃಗಗಳಲ್ಲಿ ಹತ್ತು ಲಕ್ಷಗಳು, ಸರ್ಪಗಳಲ್ಲಿ ಹನ್ನೊಂದು ಲಕ್ಷ ಜನ್ಮಗಳು ವೃಕ್ಷಾದಿಸ್ಥಾವ ರಗಳಲ್ಲಿ ೧೮ ಲಕ್ಷ ಜನ್ಮಗಳು, ಹೀಗೆ ಏಳು ತೆರದ ಜನ್ಮಗಳಲ್ಲಿ ೮೪ ಲಕ್ಷ ಜನ್ಮಗ ಳಾಗುತ್ತವೆ. "ಉಭಾಭ್ಯಾಂ ಪುಣ್ಯಪಾಪಾಭ್ಯಾಂ ಮಾನುಷ್ಯಂಲಭತೇ ನರಃ" ಎಂಬ ಪ್ರಮಾಣದಿಂದ ಸಮ ಪುಣ್ಯಪಾಪಗಳಿಂದ ಮನುಷ್ಯ ಜನ್ಮವು ದೊರಕುವುದು. ತಿರ್ಯಗ್ಜನ್ಮದಲ್ಲಾಗಲಿ, ದೇವತೆಗಳ ಜನ್ಮದಲ್ಲಾಗಲಿ, ಸ್ಥಾ ವರ ಜನ್ಮದಲ್ಲಾಗಲಿ. ಪುರುಷಾರ್ಥವಾದ ಮೋಕ್ಷವನ್ನು ಪಡೆಯಲವಕಾಶ ವಿಲ್ಲ. ನರಜನ್ಮವು ಮೋಕ್ಷಸಂಪತ್ತಿಗೂ ಸ್ವರ್ಗಸಾಧನಕ್ಕೂ, ಉಪಾಯ ಗಳನ್ನು ಅನುಷ್ಠಿಸಲಿಕ್ಕೆ ಒಂದು ಉಪಕರಣವಾದಂತೆ ತಿರ್ಯಗಾದಿ ಜನ್ಮ ಕ್ಕೂ ಮಾರ್ಗವಾಗಿದೆ. ಈ ಶರೀರವು ಒಂದು ಭೂಮಿಯು, ಇದನ್ನು ಚೆನ್ನಾ ಗಿ ಸಾಗುಮಾಡಿದವನು ಮುಕ್ತಿಯ ಅಮೃತ ಫಲವನ್ನು ಹೊಂದುವ ನು. ಹಾಳುಗೆಡಹಿದರೆ ಸ್ವರ್ಗ ನರಕದ ಮುಳ್ಳು ಜಾಲಿಯನ್ನು ಬೆಳೆವನು.

CC-0. Jangamwadi Math Collection. Digitized by eGangotri

ಭೂಮಿಯನ್ನು ಹೊಲವನ್ನು ಮಾಡಲಿಕ್ಕೆ ಅಗಿದು ಕೆಟ್ಟಕಸದ ಬೇರುಗಳನ್ನು ಕೀಳಬೇಕು. ಈ ತನುವಿನಲ್ಲಿ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ತಾಪಗಳೂ (ಅಂದರೆ ರೋಗಾದಿಗಳಿಂದ ಉಂಟಾಗುವ ಪೀಡೆಗಳೂ, ಚಳಿ ಮಳೆ ಬೆಂಕಿ ಗಾಳಿ ಸಿಡಿಲುಗಳಿಂದೊದಗುವ ಬಾಧೆಗಳೂ, ನವಗ್ರಹಾದಿಗಳಿಂದ ಅಡರುವ ವಿಪತ್ತುಗಳೂ,) ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶವೆಂಬ ಪಂಚಕ್ಲೇಶಗಳೂ (ಪರಶಿವಸ್ವರೂಪನು ತಾನಾಗಿ ಜೀವನೆಂದೂ ಅಜ್ಞನೆಂದೂ ಭಾವಿಸುವುದು; ಇಂದ್ರಿಯ ಸುಖದುಃಖಗಳ ತೊಡಕಿನ ದೇಹಭಾವವನ್ನು ಬಿಡಲಾರದತನ; ಇಂದ್ರಿಯ ಸುಖಗಳನ್ನೆ ಚಿಂತಿಸುವುದು; ಇಂದ್ರಿಯ ಸುಖಕ್ಕೆ ತಡೆಯಾಗುವ ಪದಾರ್ಥಗಳ ಮೇಲೆ ಸಿಟ್ಟು; ಸಂಸೃತಿ ಭಾವವನ್ನು ಬಿಡಬೇಕೆಂದರೂ ಬಿಡಲಾರದಿರುವುದು )ಷಡೂರ್ಮಿಗಳೂ (ಅಂದರೆ ಬುಭುಕ್ಷಾ, ತೃಷಾ, ಜರಾಮೃತಿ, ಶೋಕ ಮೋಹಗಳೂ; ಹಸಿವು ನೀರಡಿಕೆ ಪ್ರಾಣಧರ್ಮ, ಮುಪ್ಪು ಸಾವು ಶರೀರಧರ್ಮ, ದುಃಖಮೋಹ ಬುದ್ಧಿಧರ್ಮ,) ಸಪ್ತ ವ್ಯಸನಗಳು (ತನುವ್ಯಸನ-ಶರೀರವು ಕೃಶವಾಯ್ತು ಎಂಬ ಮುಂತಾದ ಚಿಂತೆ; ಮನೋವ್ಯಸನ-ಅಸತ್ಯ ವ್ಯವಹಾರಗಳಲ್ಲಿ ಪ್ರೀತಿ; ಧನವ್ಯಸನ-ಧನ ಸಂಚಯ ಮಾಡಬೇಕೆಂಬ ಚಿಂತೆ, ರಾಜ್ಯ ವ್ಯಸನ-ಕರಿತುರಗಾದಿವಾಹನಗಳನ್ನು ಏರಿ ಮೆರೆಯಬೇಕೆಂಬ ಬಯಕೆ; ವಿಶ್ವವ್ಯಸನ-ಗೃಹಕ್ಷೇತ್ರಾದಿಗಳನ್ನು ಸಂಪಾದಿಸಬೇಕೆಂಬ ಆಕಾಂಕ್ಷೆ; ಉತ್ಸಾಹವ್ಯಸನ-ಜಯಂತನಳಕೂಬರಾದಿಗಳಂತೆ ವಿಲಾಸಲಾಲಸೆ; ಸೇವಕವ್ಯಸನ-ಅನೇಕ ಜನ ಸೇವಕರನ್ನು ಇಟ್ಟುಕೊಂಡು ಚೊಕ್ಕಳವಾಗಿರಬೇಕೆಂಬ ಬಯಕೆ,) ಷಡ್ಭ್ರಮೆಗಳೂ (ಜಾತಿಭ್ರಮೆ ವರ್ಣಭ್ರಮೆ, ಆಶ್ರಮಭ್ರಮೆ ಕುಲಭ್ರಮೆ, ಗೋತ್ರಭ್ರಮೆ, ನಾಮಭ್ರಮೆ) ಅಷ್ಟಮದಗಳೂ (ಕುಲಮದ ಛಲಮದ ಧನಮದ ರೂಪಮದ ಯೌವನಮದ ವಿದ್ಯಾಮದ ರಾಜ್ಯಮದ ತಪೋಮದ) ಇನ್ನನೇಕ ದೋಷಗಳೂ ಕಸದಂತಿರುವವು. ಈ ಕಸಗಳಿಗೆಲ್ಲ ಒಂದೇ ಭ್ರಾಂತಿಯೆಂಬ ಬೇರು. ಭ್ರಾಂತಿಯೆಂದರೆ ಜೀವಭಾವವು. ಜೀವಭಾವದಿಂದಿಲ್ಲದೆ ತಾಪತ್ರಯಾದಿಗಳು ತೋರಲಾರವು ಭ್ರಾಂತಿಯನ್ನಗಿಯಲಿಕ್ಕೆ ಮನವೆ ಗುದ್ದಲಿಯು. ಇಲ್ಲಿ ಮನವೆಂದರೆ ಸ್ವಾತ್ಮವಿವೇಚನವು. ಆತ್ಮವಿವೇಕದಿಂದ ಶರೀರಾದಿಯಿಂದ ತನ್ನನ್ನು ಬೇರ್ಪಡಿಸುವುದೆ ಜೀವಭಾವನಿರಸನವು ಮನದ ಗುದ್ದಲಿಯಿಂದ ಭ್ರಾಂತಿಯ ಬೇರನ್ನು ಅಗಿಯುವಾಗ ಸಂಸಾರದ ಹೆಂಟೆಗಳು ಏಳುವವು. ಸಂಸಾರರೂಪವಾದ ಮೇಲೆ ವಿವರಿಸಿದ ತಾಪಾದಿಗಳು ಭಿನ್ನ ಭಿನ್ನವಾಗುವವು. ಆದರೆ ಇಷ್ಟರಿಂದ ಕಾರ್ಯವಾಗದು. ಆ ಹೆಂಟೆಗಳನ್ನು ಒಡೆದು ಮಣ್ಣುಮಾಡಬೇಕು. ಇದು ನಿಷ್ಠೆಯ ಕಾರ್ಯವು. ಹೀಗೆ ಶರೀರವೆಂಬ ಹೊಲವು ಹಸನಾದಾಗ ಬ್ರಹ್ಮಬೀಜವೆಂಬ ಲಿಂಗ ಸಂಬಂಧವನ್ನು ಮಾಡಿ

CC-0. Jangamwadi Math Collection. Digitized by eGangotri.

ದನು ಒಕ್ಕಲಿಗನು ಹಸನಾದ ಹೊಲದಲ್ಲಿ ಒಳ್ಳೆಯದಾದ ಬೀಜವನ್ನು ಬಿತ್ತುವನು. ಅದರಂತೆಯೇ ಆತ್ಮಾನಾತ್ಮ ವಿವೇಕದಿಂದ ಶರೀರಗತವಾದ ದೋಷಗಳನ್ನು ತೆಗೆದು ನಿಷ್ಠೆಯಿಂದ ಸಂಗ್ರಹಿಸಿ ಇಷ್ಟಲಿಂಗವೆಂಬ ಬೀಜವನ್ನು ಬಿತ್ತಲು ಸ್ವಾನುಭವವೆಂಬ ಸಸಿಯು ತಲೆದೋರಿತು. ಈ ಸಸಿಗೆ ನೀರುಣಿಸಬೇಕು. ನೀರಿಲ್ಲದೆ ಹೋದರೆ ಕರಿಯಾಗುವದು. ಸ್ವಾನುಭವಸಸಿಯು ಅತ್ಯಂತ ಕೋಮಲವು. ಅದಕ್ಕೆ ಉಣಿಸುವ ನೀರು ಬಹಳ ಪರಿಶುದ್ಧವಾದುದಿರಬೇಕು. ಅದರಲ್ಲಿ ಆವ ತೆರದ ಸವುಳು ಇರಬಾರದು. ಆ ನೀರು ಬರುವ ಬಾವಿಯು ಒಳ್ಳೆಯದಿರಬೇಕು. ಸುಜ್ಞಾನವೆಂಬ ಆ ನೀರಿನ ಬಾವಿಯು ಅಖಂಡಮಂಡಲವು. ಹೇಗೆಂದರೆ ಪ್ರಪಂಚದ ಅನುಭವಕ್ಕೆ ಪೋಷಕವಾದ ಜ್ಞಾನವು ಮಾಯಾಕಾರ್ಯಗಳಾದ ಇಂದ್ರಿಯ ಅಂತಃಕರಣಗಳೆಂಬ ಖಂಡಗಳಲ್ಲಿ ಹಾಯ್ದು ಸಣ ಸಣ ಸೆಲೆಗಳಿಂದ ಬರುತ್ತದೆ. ಅದರಲ್ಲಿ ಅಜ್ಞಾನ ಅಥವಾ ಮಲವೆಂಬ ಕೆಸರುಂಟು. ಕರ್ಮವೆಂಬ ಸವುಳು ಬೆರೆತಿದೆ. ಆದರೆ ಸ್ವಾನುಭವಸಸಿಯನ್ನು ಪೋಷಿಸುವ ಜ್ಞಾನವು ಮಾಯೆಯ ತೊಡಕಿಲ್ಲದರಿಂದ ಅಖಂಡಾನುಭವಮಯವಾದ ಬಾವಿಯಿಂದ ಹೊರಡುವುದು. ಇದರಲ್ಲಿ ಬಾಹ್ಯಕರ್ಮದ ಸವುಳಿಲ್ಲ. ಮಲವೆಂಬ ಕಲಕು ಇಲ್ಲ. ಅಂದರೆ ಮಲವೆಂಬ ಸ್ವಾತ್ಮದ ಅಜ್ಞಾನ, ಮಾಯೆಯೆಂಬ ಭಿನ್ನವಸ್ತುಗಳ ಜ್ಞಾನ, ಕರ್ಮವೆಂಬ ಬಾಹ್ಯವಾದ ಭಿನ್ನಪದಾರ್ಥಗಳ ವಿಷಯದಲ್ಲಿ ವ್ಯಾಪಾರ, ಇಂತೆಂಬೀ ಖಂಡಗಳಿಲ್ಲದರಿಂದ ಅಖಂಡವಾದ ಶಿವತೇಜೋರಾಶಿಯೇ ಅಖಂಡಮಂಡಲವೆಂಬ ಬಾವಿ. ಅದುವೆ ಸ್ವಾನುಭವ ಸಸಿಯಬೆಳೆಗೆ ಪೋಷಕವು. ಈ ನೀರನ್ನು ಹೇಗೆ ಎತ್ತಬೇಕು? ಪವನದ ರಾಟಾಳದಿಂದ. ಪವನವು ಅಥವಾ ಶ್ವಾಸವು ಆತ್ಮನ ವ್ಯಾಪಾರವು. ಜೀವನು ಕಾಣುವ ಸರ್ವ ಅನುಭವಗಳಿಗಾದರು ಅದೆ ಮೂಲವು. ಆ ಅರುವಿನ ಎಚ್ಚರವು ಅಥವಾ ಸದಾಕಾಲದಲ್ಲಿ ತನ್ನ ಮರವೆ ಇಲ್ಲದಿರುವಣವು ಪ್ರಾಣವ್ಯಾಪಾರದಿಂದ ತೋರುತ್ತದೆ. ಪ್ರಾಣವಾಯುವು ಈಡೆ ಪಿಂಗಳೆಗಳಲ್ಲಿ ಚಲಿಸಿ ಆಯಾ ಇಂದ್ರಿಯಗಳಲ್ಲಿ ಮನಸನ್ನೂ ಅದನ್ನೊಡಗೂಡಿದ ಜ್ಞಾನವನ್ನೂ ಸಂಬಂಧಿಸಿ ಪ್ರಾಪಂಚಿಕ ವಿಷಯಗಳನ್ನು ತೋರಿಸುವುದು. ಈ ಮಾರ್ಗವನ್ನು ತಡೆದು ಸುಷುಮ್ನೆಯೆಂಬ ಪಶ್ಚಿಮಮಾರ್ಗದಿಂದ ವಾಯುವು ಸುಳಿಯುತ್ತ ಹೋಗಲು ಸಾಂಸಾರಿಕ ಭಾವವು ತಗಲದ ಶುದ್ಧಾನುಭವದ ರಸವು ಮುಟ್ಟಿ, ಸ್ವಾನುಭವಸಸ್ಯಕ್ಕೆ ಪುಷ್ಟಿಯು ದೊರಕುವದು. ಸಸಿಯನ್ನು ಹಸುಗಳು ಮೆಯ್ದು ಹಾಳುಮಾಡುವುವು. ಅದರಂತೆ ಸ್ವಾನುಭವದ ಸಸಿಯನ್ನು ಇಂದ್ರಿಯಗಳ ಸ್ವಚ್ಛಂದವೃತ್ತಿಯೆಂಬ ಹೋರಿಗಳು ಮೆಯ್ದು ಕೆಡಿಸುವುವು. ಅದರಿಂದ ಸಮತೆ-ಸುಬುದ್ಧಿಯಾದಿ ಸದ್ಗುಣಗಳಿಂದ ಅಂತಃಕ

CC-0. Jangamwadi Math Collection. Digitized by eGangotri

ರಣವು ಕದಡದಿರುವಣ. ಸೈರಣೆ ಬಂದ ಸಂಕಟಗಳಲ್ಲಿ ಗಾಂಭೀರ್ಯ ವೆಂಬ ಬೇಲಿಯನ್ನು ಹಾಕಿ ಇಂದ್ರಿಯಗಳನ್ನೂ ಅಂತಃಕರಣವನ್ನೂ ಅತ್ತಿತ್ತ ಚಲಿಸಿ ಸ್ವಾನುಭವವನ್ನು ಕೆಡಿಸಬೀಯಲಿಲ್ಲ. ಇದುವೆ ನಿಜವಾದ ಒಕ್ಕಲತನವು. ಗೊಗ್ಗಯ್ಯನೆ ಈ ಒಕ್ಕಲತನವನ್ನು ಕಲಿತು ಮೋಕ್ಷದ ಅಮೃತಫಲವನ್ನುಂಡು ಹಾಗಲ್ಲದೆ ಭೂಮಿಯನ್ನೂಳುವ ಒಕ್ಕಲತನವನ್ನು ಮಾಡಿದರೆ ಬಾಹ್ಯಶರೀರದ ಪುಷ್ಟಿಗೆ ಮಾತ್ರ ಸಾಹಾಯಕವಾದಹುದಲ್ಲದೆ ನಿನ್ನ ಆತ್ಮಪುಷ್ಟಿಯಾಗದು, ಆತ್ಮಪುಷ್ಟಿಯಿಲ್ಲದ ಜೀವನವು ಹಾಳು ಜೀವನವು.

ಗೊಗ್ಗಯ್ಯನು ಈ ಉಪದೇಶದಿಂದಲೂ ಪ್ರಭುವಿನ ಇನ್ನುಳಿದ ಸದ್ಬೋಧೆಯಿಂದಲೂ ಕೃತಾರ್ಥನಾದನು. ಕೃತಾರ್ಥನಾದನು ಅಂದರೆ ಸ್ವರೂಪಸಿದ್ಧಿಯನ್ನು ಹೊಂದಿದ ಶಿಷ್ಯನಿಗೂ ಗುರುವಿಗೂ ಭೇದವಿಲ್ಲೆಂಬುದು ವೀರಶೈವಸಿದ್ಧಾಂತವು. "ತತ್ತ್ವಮಸಿ" ನೀನೇ ಆ ಪರವಸ್ತುವಿರುವಿ, ಎಂಬ ಉಪನಿಷದ್ವಾಕ್ಯವನ್ನೆ ಗುರುವು ಬೋಧಿಸಿರುವನು. ಮುಮುಕ್ಷುವು ಬಂಧನಿವೃತ್ತಿಗಾಗಿ ಹುಡುಕುತ್ತಿರುವ ಪರವಸ್ತುವೆ ತತ್ = ಅದು ಎಂಬ ಶಬ್ದದಿಂದ ಹೇಳಲ್ಪಡುತ್ತದೆ. ಹುಡುಕುತ್ತಿರುವ ಶಿಷ್ಯನೆ ತ್ವಮ್ = ನೀನು ಎಂಬ ವಚನದಿಂದ ನಿರ್ದೇಶಿಸಲ್ಪಡುತ್ತದೆ. ನಿನ್ನಿಂದನ್ಯವಲ್ಲದ ಆ ಪರವಸ್ತುವನ್ನು ದೃಗ್ವಿಷಯಗಳಿಂ ಬಾಹ್ಯದ ಪ್ರಾಪಂಚಿಕ ಪದಾರ್ಥಗಳಲ್ಲಿ ಹುಡುಕಬೇಡ ಅದು ನಿನೇ ಆಗಿರುವೆ ಎಂದು ಗುರುವು ಪರವಸ್ತುವಿಗೂ ಶಿಷ್ಯನಿಗೂ ಇರುವ ಅಬೇಧವನ್ನು ಅಸಿ= ಇರುವಿ ಎಂಬ ಪದದಿಂದ ಬೋಧಿಸುವನು. ಈ ಮೂರು ಪದಗಳು ಇಷ್ಟ ಪ್ರಾಣ ಭಾವಲಿಂಗಗಳೆಂದು ವರ್ತಿಸುತ್ತವೆ. ಅಣುರೇಣುತೃಣಕಾಷ್ಠವೆಲ್ಲಕ್ಕು ಸತ್ತೆಯನ್ನುಂಟುಮಾಡುವ ಮೂಲಕಾರಣವು ಅವುಗಳನ್ನೆಲ್ಲ ತುಂಬಿತುಳುಕುತ್ತದೆ. ಮೂಲಕಾರಣವಿಲ್ಲದೆ ಜಗತ್ತು ತೋರಲಾರದು. ವಿಕಾರವನ್ನು ಹೊಂದುತ್ತಿರುವ ಪಂಚಭೂತಗಳು ಜಗತ್ತಿಗೆ ಮೂಲಕಾರಣವಾಗಲಾರವು. ವಿಕಾರವೆಂದರೆ ವಿವಿಧಾಕಾರವೆಂಬರ್ಥ. ಆದುದರಿಂದ ವಿವಿಧಾಕಾರದ ಬಹುರೂಪವನ್ನು ತಾನು ಹೊಂದದೆ ವಿವಿಧಾಕಾರಕ್ಕೆಲ್ಲ ಆಧಾರವಾದ ವಸ್ತುವೆ ಮೂಲಕಾರಣವೆನಿಸುವುದು. ಅಂತಪ್ಪ ಮೂಲಕಾರಣವೆ ಸರ್ವವಿಕಾರಗಳಲ್ಲಿ ವ್ಯಾಪಿಸಿ ತೋರುತ್ತದೆ. ನಂಮ ದೃಷ್ಟಿಗೆ ಬೀಳುವ ಪ್ರತ್ಯೇಕ ಪದಾರ್ಥದಲ್ಲಿಯೂ ಅದು ತುಂಬಿದೆ. ಈ ದೃಷ್ಟಿಯನ್ನು ತಿದ್ದಬೇಕಾಗಿದೆ. ದೃಷ್ಟಿಯು ತಿದ್ದಲ್ಪಟ್ಟರೆ ಪ್ರಪಂಚದ ಮರೆಯಲ್ಲಿರುವ ಪರವಸ್ತುವು ಜ್ಞಾನಚಕ್ಷುವಿಗೆ ತೋರುವುದು. ಜಗತ್ತಿನಲ್ಲಿಯ ವಸ್ತುಗಳಿಂದರು ಜ್ಞಾನಚಕ್ಷುವಿನಿಂದಲೆ

CC-0. Jangamwadi Math Collection. Digitized by eGangotri

ಗೋಚರಿಸುತ್ತಲಿವೆ. ಜ್ಞಾನಚಕ್ಷುವಿಗೆ ವಿವಿಧಾಕಾರಗಳ ನಿಜವಾದ ಸ್ವರೂಪದ ತೋರದಿರುವಿಕೆಯೆಂಬ ಮಾಯೆಯು ಮರೆಯಾಗಿ ಅವುಗಳು ಮೂಲಕಾರಣಕ್ಕೂ ತಮಗೂ ಇರುವ ಸಂಬಂಧದ ಯೋಗವಿಲ್ಲದೆ ಕಾಣುತ್ತವೆ. ಗುರುವು ಜಗತ್ತಿನ ಮೂಲಕಾರಣವು ಆದನ್ನೆಲ್ಲ ತನ್ನಶಕ್ತಿಯಿಂದ ವ್ಯಾಪಿಸಿದ ಶಿವತತ್ತ್ವವೆ ನೀನೆಂದು ಶಿಷ್ಯನನ್ನು ಬೋಧಿಸಿ ಆ ಬೋಧವು ಮೂರ್ತಸ್ವರೂಪವಾಗಲೆಂದು ಇಷ್ಟಲಿಂಗವನ್ನು ಶಿಷ್ಯನಿಗೆ ಅನುಗ್ರಹಿಸುವನು. ಇಷ್ಟಲಿಂಗವು ನೇತ್ರಕ್ಕೆ ಘಟಾದಿಗಳಂತೆ ತೋರದು. ನೇತ್ರಕಲೆಗೆ ತೋರುವುದು. ಬಾಹ್ಯ ಘಟಪಟಾದಿಗಳ ಹಲವು ರೂಪಗಳನ್ನು ಕಾಣ್ಬುದು ನೇತ್ರವು. ಆ ನೇತ್ರವನ್ನು ತುಂಬಿದ ಮತ್ತು ಅದಕ್ಕೆ ಪ್ರಕಾಶವನ್ನುಂಟು ಮಾಡುವ ಆತ್ಮಸ್ಫುರಣವೆ ನೇತ್ರಕಲೆಯು. ಘಟಾದಿಗಳು ನನ್ನದು ಎಂಬ ಅಭಿಮಾನ ಅಥವಾ ಈ ಅಭಿಮಾನವಿಲ್ಲದ ಉದಾಸೀನತೆ ಎಂಬ ಜೀವ ವ್ಯವಹಾರಕ್ಕೆ ವಿಷಯವಾಗಿ ನೇತ್ರಕ್ಕೆ ಗೋಚರಿಸಬಲ್ಲವು. ಇದೇಮಾಯೆ. ಇದೇ ಪದಾರ್ಥಗಳ ಮೂಲಕಾರಣವಾದ ಶಿವತತ್ತ್ವದ ಮರೆ. ಪದಾರ್ಥಗಳನ್ನು ವಿಷಯೀಕರಿಸಿದ ನೇತ್ರವನ್ನು ದಾಟಿ ನೇತ್ರಕಲೆಯನ್ನೇ ಲಕ್ಷಿಸಿದರೆ ಆತ್ಮಸ್ಫುರಣದಲ್ಲಿ ಅನನ್ಯವಾದ ಆನಂದವೆ ಇಷ್ಟವು. ಈ ಆನಂದವೆ ರಾಗಿಗಳಿಗೆ ರೂಪಾನಂದವಾಗಿದೆ. ಇದುವೆ ದೃಶ್ಯಗಳಲ್ಲಿ ತೋರುವ ಪ್ರೇಮವೆಂಬ ಸಾರವು. ಈ ಸಾರವನ್ನು ವಿಷಯಗಳಲ್ಲಿ ವ್ಯಾಪಿಸದಂತೆ ತಡೆಯುವ ತಾರಕ ದಂಡ ಕುಂಡಲ ಅರ್ಧಚಂದ್ರ ದರ್ಪಣ ಜ್ಯೋತಿರಾಕಾರಗಳನ್ನುಳ್ಳುದೆ ಇಷ್ಟಲಿಂಗವು. ಈ ಲಿಂಗವನ್ನು ನೇತ್ರಕಲೆಯಿಂದ ನಿರೀಕ್ಷಿಸಬಹುದಲ್ಲದೆ ನೇತ್ರದಿಂದ ನಿರೀಕ್ಷಿಸಲಾಗದು.

## ಲಿಂಗಧಾರಣ ವಿವೇಚನ.

ಆತ್ಮನ ಶರೀರವು ಬಾಹ್ಯದಲ್ಲಿ ತೋರುವ ದೃಶ್ಯವಸ್ತುಗಳ ಕಾರ್ಯವಾಗಿದೆ. ಹೊರಗಣ ಪಂಚಭೂತಗಳ ಕಾರ್ಯವೆ ಈ ಶರೀರವು. ಪಂಚಭೂತಮಯವಾದ ಅನ್ನಾದಿಗಳಿಂದಲೆ ಇದರ ಪೋಷಣವು ಇದು ಆತ್ಮನಲ್ಲಿ ನಾನು ಅಥವಾ ತಾನು ಎಂಬಭಿಮಾನಕ್ಕೆ ಪಾತ್ರವಾಗಿದೆ. ದೃಶ್ಯವಾದುದರಿಂದ ಇದು ಎನಿಸಿಕೊಂಡು ಬಾಹ್ಯವೆನಿಸಿಯೂ, ನಾನೆಂಬಭಿಮಾನಕ್ಕೆ ಪಾತ್ರವಾದುದರಿಂದ ತಾನು ಎನಿಸಿಕೊಳ್ಳಲಿಕ್ಕೂ ದೇಹವು ಆಸ್ಪದವಾಗಿದೆ. ಅಂದರೆ ಬಾಹ್ಯವಿಶ್ವದ ತೋರಿಕೆ ಮತ್ತು ಆತ್ಮನ ಸ್ಫುರಣ ಅಥವಾ ಪ್ರಕಾಶ ಇವೆರಡರ ಸಂಮೇಲನವೆಂಬ ಅಹಂಕಾರದ ತೊಡಕಿನ ಮೆಟ್ಟು ಈ ಶರೀರವು.

CC-0. Jangamwadi Math Collection. Digitized by eGangotri

ಇಂತಹ ಶರೀರಕ್ಕೆ ಗುರುವು ದೃಶ್ಯಸಾರವೆ ಆಕಾರವಾದ, ದೃಶ್ಯ ಪ್ರಕಟನಾಸಾಮರ್ಥ್ಯವೆಂಬ ಮಂತ್ರವೆ ಪ್ರಾಣವಾದ, ಶಕ್ತಿಯನ್ನು ತನ್ನಲ್ಲಿ ಸಮರಸೀಕರಿಸಿದ ಪರವಸ್ತುವೆ ತಾನಾದ, ಇಷ್ಟಲಿಂಗವನ್ನು ಸಂಬಂಧ ಪಡಿಸುವನು. ಅದರಿಂದ ಇದುವರೆಗೆ ಜೀವ ಭೋಗಕ್ಕೆ ಸ್ಥಾನವಾಗಿ ಜಗತ್ತಿನ ದೃಶ್ಯವಸ್ತುಗಳ ಪರಿಣಾಮವೆನಿಸುವ ದೇಹವು ಜಗತ್ತಿನ ದೃಶ್ಯಸಾರವಾಗಿಯೂ, ಮಂತ್ರ ಪ್ರಾಣವಾಗಿಯೂ, ಪರಮಾತ್ಮನೆಂಬ ಆತ್ಮನುಳ್ಳದಾಗಿಯೂ ತೋರಿತು. ಅಂದರೆ ದೇಹಾಭಿಮಾನಿ ಚೈತನ್ಯನೆಂಬ ವಿಶ್ವಜೀವನು ಇಷ್ಟಲಿಂಗದಲ್ಲಿಯೂ, ಪ್ರಾಣಾಭಿಮಾನಿ ಎಂಬ ಪ್ರಾಣಲಿಂಗದಲ್ಲಿಯೂ, ಕಾರಣವ್ಯಾಪಕನಾದ ಪ್ರಾಜ್ಞನು ಭಾವಲಿಂಗದಲ್ಲಿಯೂ ಬೆರೆತನು. ಹೀಗಾಗಲು ಶಿವಜೀವತತ್ತ್ವಗಳು ಒಂದಾದವು. ಹೇಗೆಂದರೆ. ಇದುವರೆಗೆ ವಿಶ್ವನಿಯಾಮಕವಾದ ಶಿವಚೈತನ್ಯವು ತನ್ನ ಶಕ್ತಿಪ್ರಭಾವದಿಂದ ಪ್ರಕಟಿಸಿದ ದೃಶ್ಯಪ್ರಪಂಚವೂ, ಆ ಪ್ರಪಂಚವನ್ನು ಎದುರಿಟ್ಟು ಭಿನ್ನವೆನಿಸಿ ನೋಡುವ ಶಿವನ ಒಂದಂಶವಾದ ಚೈತನ್ಯವೂ ಜಗತ್ತು ಮತ್ತು ಜೀವ ಎಂಬ ಪದಾರ್ಥಗಳಾಗಿದ್ದವು. ಬಾಹ್ಯ ಪ್ರಪಂಚದಲ್ಲಿಯ ಪದಾರ್ಥಗಳಿಂದುಟಾಗುವ ಅನುಕೂಲ ಪ್ರತಿಕೂಲವೇದನಗಳಿಂದ ಜೀವನಿಗೆ ಸುಖದುಃಖಾನುಭವವಾಗಿ ಸಂಸೃತಿಯ ಬಂಧವಾಗಿತ್ತು. ಈಗ ಸದ್ಗುರೂಪದೇಶಪೂರ್ವಕವಾದ ಇಷ್ಟಲಿಂಗವು ಮೇಲೆ ವಿವರಿಸಿದ ರೀತಿಯಲ್ಲಿ ಶರೀರ ಸಂಗತವಾಗಲು, ನಿಯಾಮಕ ಚೈತನ್ಯವೆಂಬ ಸಾಗರದಲ್ಲಿ ಜೀವಚೈತನ್ಯವು ಅಭೇದವಾಗಿ ಬೆರೆಯಿತು–ಬಾಹ್ಯದ ವಿಷಯಗಳು ಈ ಚೈತನ್ಯದ ಶಕ್ತಿವಿಲಾಸರೂಪವೆಂಬುದು ಅರಿಕೆಯಾಯ್ತು. ಸಂಸಾರಬಂಧವು ತೊಲಗಿತು. ದೃಶ್ಯವನ್ನು ತೋರಿಸುವ ಚೈತನ್ಯವೂ ದೃಶ್ಯವನ್ನು ಕಾಣುವ ಚೈತನ್ಯವೂ ಒಂದೆಯಾಗಿ ದೇಹವು ಪತನವಾಗುವ ತನಕ ಅಗ್ನಿಯೂ ಪ್ರಕಾಶವೂ ಎಂಬಂತೆ ಒಂದೆಯಾದರೂ ಭೇದವಾಗಿ ವ್ಯವಹರಿಸಲ್ಪಟ್ಟು ದೇಹಪಾತವಲ್ಲಿ ಒಂದೆಯೊಂದು ಶಾಂತತೇಜವಾಗಿ ಉಳಿವುವು.

## ಗೊಗ್ಗಯ್ಯನ ಕೃತಾರ್ಥತೆ.

ವೀರಶೈವ ಸಿದ್ಧಾಂತಕ್ಕೂ ಇನ್ನುಳಿದ ಆಧ್ಯಾತ್ಮಿಕ ಸಿದ್ಧಾಂತಗಳಿಗೂ ಅಧಿಕಾರ ವಿಷಯದಲ್ಲಿರುವ ಮಹದಂತರವನ್ನು ಮೇಲೆ ವಿವರಿಸಿರುವೆನು. ಶ್ರೀಮದಲ್ಲಮನ ಬೋಧೆಯಿಂದ ಒಕ್ಕಲಿಗನಾದ ಗೊಗ್ಗಯ್ಯನು ಶಿವಾತ್ಮತಾ ವೇದಿಯಾದುದರಿಂದ ಆತನು ಗುರುಸ್ವರೂಪವೆ ಆದನು. ಶಿವಸ್ವರೂಪದಲ್ಲಿ ವರ್ಣಗಳುಳಿಯಲಾರವು ಈ ಸಿದ್ಧಾಂತವನ್ನು ವ್ಯಕ್ತಗೊಳಿಸಲಿಕ್ಕಾಗಿಯೂ ಗುರುಶಿಷ್ಯರಿಗಿರುವ ಅಭೇದವನ್ನು ಪ್ರತಿಪಾದಿಸಲಿಕ್ಕಾಗಿಯೂ

CC-0. Jangamwadi Math Collection. Digitized by eGangotri

ಅಲ್ಲಮನು ಗೊಗ್ಗಯ್ಯನನ್ನು ಸ್ತುತಿಸಿದನು. ನೀನೇ ಪರವಸ್ತುವೆಂಬು ಶಿಷ್ಯನನ್ನು ಬೋಧಿಸಿದ ಸದ್ಗುರುವು ಆ ಶಿಷ್ಯನಿಗೆ ನೀನು ಗುರುವಾದ ತಾನಲ್ಲವೆಂಬು ಬೋಧಿಸಲಾರನು.

## ಶಕ್ತಿವಿಶಿಷ್ಟಾದ್ವೈತವೆ ಅಲ್ಲಮನ ಸಿದ್ಧಾಂತವು.

ಮೇಲಿನ ವಿವರಣದಿಂದ ಅಲ್ಲಮನ ಸಿದ್ಧಾಂತ ಸ್ವರೂಪವು ನಮಗಾಯ್ತು. ಅದಾವುದೆಂಪರೆ ಸಕಲೋಪನಿಷತ್ತುಗಳಲ್ಲಿಯೂ ಶಿವಾಗಮಂಗಳಲ್ಲಿಯೂ ಹೇಳಿದ ಶಕ್ತಿ ವಿಶಿಷ್ಟ ಶಿವಾದ್ವೈತವು. ಇದು ಗೊಗ್ಗಯ್ಯನನ್ನು ಬೋಧಿಸಿದ "ಬಿತ್ತಿದೆನಯ್ಯ ಬ್ರಹ್ಮಬೀಜವ ಎಂಬ ಶಬ್ದಗಳಲ್ಲಿ ವ್ಯಕ್ತವಾಗಿದೆ. ಗೊಗ್ಗಯ್ಯನು ಮೊದಲೆ ಲಿಂಗಧಾರಿಯಾಗಿದ್ದನು. ಆದರೆ ಆದರ ರಹಸ್ಯದಲ್ಲಿ ಅಭ್ಯಾಸಿಯಾಗಿದ್ದನಲ್ಲದೆ ತತ್ತ್ವವನ್ನರಿತವನಾಗಿರಲಿಲ್ಲ ಅವನನ್ನು ಪ್ರಭುವು ತನ್ನ ವಚನದಿಂದ ಬೋಧಿಸಿದನು. ಇದೊಂದು ವಾಕ್ಯದಿಂದಲೆ ಆತನ ಸಿದ್ಧಾಂವನ್ನು ತಿಳಿಯಲಾರದವರಿಗಾಗಿ ಇನ್ನು ಒಂದೆರಡುದಾಹರಣಗಳನ್ನು ಕೊಡುವದುಚಿತವಾಗಿದೆ.

## ಲಿಂಗಧಾರಣವು ಸಂಸೃತಿ ಮೂಲಕುಠಾರವು.

"ಕಾಣಬಾರದ ಲಿಂಗವೆನ್ನ ಕರಸ್ಥಲಕ್ಕೆ ಬಂದರೆ ಹೇಳಲಮ್ಮೆ ಕೇಳಲಮ್ಮೆ ಎನಗಿದು ಸೋಜಿಗ! ಗೋಹೇಶ್ವರನೆಂಬ ಲಿಂಗ ನಿರಾಕಾರ ಬಯಲು ಸಾಕಾರವಾಗಿ ಎನ್ನ ಕರಸ್ಥಲಕ್ಕೆ ಬಂದರೆ ಹೇಳಲಮ್ಮೆ ಕೇಳಲಮ್ಮೆ"— ಈ ವಚನದ ವಿವರಣವು.

ಯಚ್ಚಕ್ಷುಷಾ ನಪಶ್ಯತಿಯೇನ ಚಕ್ಷೂಂಷಿಪಶ್ಯತಿ | ತದೇವ ಬ್ರಹ್ಮತ್ವಂ ವಿದ್ಧಿ ನೇದಂಯದಿದ ಮುಪಾಸತೇ ॥ ತಲವಕಾರೋಪನಿಷತ್ ೧-೬ ಆವುದೊಂದನ್ನು ಕಂಣಿಂದ ಕಾಣಲಾರನೊ, ಆವುದೊಂದರಿಂದ ಆ ಕಂಣಿನ ವೃತ್ತಿಗಳನ್ನು ತಿಳಿಯಬಲ್ಲನೊ, ಅದೆ ಬ್ರಹ್ಮವೆಂದು ತಿಳಿ. ಅನಾತ್ಮ ರೂಪವಾದ ಅಂದಗೆ ಆತ್ಮನಿಂದ ಭಿನ್ನವಾದ ಆವುದೊಂದನ್ನು (ಅಜ್ಞರು) ತಂಮಿಂದ ಭಿನ್ನವಾಗಿ ಉಪಾಸನೆಯನ್ನು ಮಾಡುವರೊ ಅದು ಬ್ರಹ್ಮವಲ್ಲೆಂದು ತಿಳಿ. ಎಂಬುಪನಿಷದ್ವಾಕ್ಯದಿಂದಲು, "ಏಕೋರುದ್ರಃ ಪರಂಜ್ಯೋತಿಃ" ಎಂಬಾಗಮ ವಚನದಿಂದಲು ಸರ್ವಪ್ರಕಾಶಗಳಿಗೂ ಮೂಲಕಾರಣವಾದುದರಿಂದ ತನ್ನಿಂದಲೆ ಪ್ರಕಾಶಿತವಾಗುವ ನೇತ್ರ ತೇಜಸ್ಸಿಗೆ ನಿಲುಕದ ಲಿಂಗವು ಗುರುವಿನ ಅನುಗ್ರಹದಿಂದ ಇಷ್ಟಲಿಂಗವೆನಿಸಿ ಕರಸ್ಥಲಕ್ಕೆ ಬರಲಾಗಿ ಆ ಸುದ್ದಿಯನ್ನು ವಚನದಿಂದ ಹೇಳಲಾರೆನು. ಹಾಗು ಎನ್ನಂತೆ ಇನ್ನೊಬ್ಬ ಭಕ್ತನ ಕರಸ್ಥಲಕ್ಕೆ ಆ ಲಿಂಗವು ಬರಲು ಆತನು ಅದರ ವಿವರ

CC-0. Jangamwadi Math Collection. Digitized by eGangotri

ವನ್ನು ಹೇಳಲನುವಾದರೆ ಕೇಳಲಾರೆನು. ಏಕೆಂದರೆ ಯಚ್ಛೋ ತ್ರೇಣ ನಶೃಣೋತಿ ಯೇನ ಶ್ರೋತ್ರಮಿದಂಶ್ರುತಂ " ಎಂಬುಪನಿಷನ್ಮಂತ್ರವೂ, " ಯತೋವಾಚೋನಿವರ್ತಂತೇ ಅಪ್ರಾಪ್ಯಮನ ಸಾಸಹ " ಎಂಬ ನಿಗಮಾಂತ ವಾಕ್ಯವೂ ಪರವಸ್ತುವಿನಲ್ಲಿ ಶ್ರವಣೇಂದ್ರಿಯವಾಗಿಂದ್ರಿಯಂಗಳ ವ್ಯವಹಾರವಿಲ್ಲೆಂದು ಹೇಳುತ್ತಿವೆ. " ಆಕಾಶ ಶರೀರಂ ಬ್ರಹ್ಮ" ಎಂದೂ " ಆಕಾಯಂ " ಎಂದೂ ನಿಗಮಾಗಮಂಗಳು ಸಾರುವುದರಿಂದ ಪರವಸ್ತುವು ನಿರಾಕಾರ ಬಯಲಾಗಿದೆ. ಅದು ತನ್ನ ಶಕ್ತಿವಿಲಾಸದಿಂದ ಇಷ್ಟಲಿಂಗವೆಂಬ ಸಾಕಾರವಾಗಿ ಎನ್ನ ಕರಸ್ಥಲಕ್ಕೆ ಬಂದರೆ ಆ ಸುಖವನ್ನು ಹೇಳಲಾರೆನು.

## ಅನುಬಂಧ ಚತುಷ್ಟಯ.

ಈ ವಚನದಲ್ಲಿ ವೀರಶೈವ ಶಾಸ್ತ್ರದ ರಹಸ್ಯವೆಲ್ಲ ಅಡಕವಾಗಿದೆ ಮತ್ತು ಆ ಶಾಸ್ತ್ರದ ಅನುಬಂಧ ಚತುಷ್ಟಯವು ಸೂಚಿತವಾಗಿದೆ. ಶಾಸ್ತ್ರದ ವಿಷಯ ಪ್ರಯೋಜನ ಅಧಿಕಾರಿ ಸಂಬಂಧ ವೆಂಬುವೆ ಅನುಬಂಧ ಚತುಷ್ಟಯವು—ಶಾಸ್ತ್ರದಲ್ಲಿ ಪ್ರತಿಪಾದಿತವೆ ವಿಷಯ ಅದರ ಜ್ಞಾನದ ಫಲವು ಪ್ರಯೋಜನ. ಶಾಸ್ತ್ರಾಭ್ಯಾಸಕ್ಕೆ ಅರ್ಹನು ಅಧಿಕಾರಿ. ಆ ಶಾಸ್ತ್ರಕ್ಕೂ ಅದರಲ್ಲಿ ಪ್ರತಿಪಾದಿತ ವಿಷಯಕ್ಕೂ ಪ್ರತಿಪಾದ್ಯಪ್ರತಿಪಾದಕ ಸಂಬಂಧ ಇತ್ಯಾದಿ ಹೇಗಂದರೆ "ಕಾಣಬಾರದ ಲಿಂಗವು " ಎಂಬುವುದರಿಂದ ನೇತ್ರಾದಿ ಪ್ರಮಾಣಗಳಿಗೆ ಗೋಚರಿಸದ ಲಿಂಗವು ಈ ವೀರಶೈವ ಶಾಸ್ತ್ರ ಪ್ರತಿಪಾದ್ಯವೆಂದು ಸಿದ್ಧವಾಗುತ್ತದೆ. ಲೋಕದಲ್ಲಿ ಪ್ರಸಿದ್ಧವಲ್ಲದ ಮತ್ತು ಪ್ರಯೋಜನವುಳ್ಳ ವಸ್ತುಶಾಸ್ತ್ರ ಪ್ರತಿಪಾದ್ಯವಹುದು. ಲೋಕದಲ್ಲಿ ಪ್ರತ್ಯಕ್ಷಾದಿ ಪ್ರಮಾಣಗಳಿಂದ ತಿಳಿದು ಬರುವ ಪದಾರ್ಥವು ಶಾಸ್ತ್ರವಿಷಯವಾಗದು. ಸಾಮಾನ್ಯವಾಗಿ ಪ್ರಸಿದ್ಧವಿಹುದಾಗಿ ವಿಶೇಷದಿಂದ ಅಪ್ರಸಿದ್ಧವಿರುವ ವಸ್ತುವು ಶಾಸ್ತ್ರವಿಷಯವಹುದು. ಇಲ್ಲಿ ಲಿಂಗವೆಂಬ ಪದಾರ್ಥವು "ಲಿಗಿಗತೌ" ಎಂಬ ಧಾತುವಿನ ಅರ್ಥವಿಚಾರದಿಂದ ಸರ್ವ ಪದಾರ್ಥಗಳ ಗತಿಸ್ಥಾನವಾದುದು ಎಂದು ಸಾಮಾನ್ಯವಾಗಿ ಪ್ರಸಿದ್ಧವಿದೆ. ಅಂದರೆ ಈ ಜಗತ್ತಿನ ಸೃಷ್ಟಿಸ್ಥಿತಿಲಯಗಳೆಂಬ ಗತಿಗೆ ಸ್ಥಾನವಾದುದೆಂಬರ್ಥ. ಆದರೆ ಇಷ್ಟರಿಂದ ಲಿಂಗಶಬ್ದಾರ್ಥದ ವಿಶೇಷಜ್ಞಾನವಾಗಲರಿಯದು. ಏಕೆಂದರೆ ಅದು ಕಾಣಬಾರದುದಾಗಿದೆ. ಒಂದಾನೊಂದು ವಸ್ತು ಕಂಡಲ್ಲದೆ ವಿಶೇಷವಾಗಿ ಅಂದರೆ ಅದರಸ್ವರೂಪದ ಪರಿಚಯ ಪೂರ್ವಕವಾಗಿ ತಿಳಿಯದು. ಸಾಂಖ್ಯರು ಸತ್ವರಜಸ್ತಮೋಗುಣಾತ್ಮಕವಾದ ಪ್ರಧಾನವೆ ಜಗತ್ಕಾರಣವೆನ್ನುವರು. ವೈಶೇಷಿಕರು ಪರಮಾಣುಗಳು ಜಗತ್ತಿನ ಕಾರಣ

CC-0. Jangamwadi Math Collection. Digitized by eGangotri

ವೆನ್ನುವರು. ಆದುದರಿಂದ ಲಿಂಗ ಪದಾರ್ಥದ ವಿಶೇಷ ಜ್ಞಾನವಾಗದ ವನು ಲಿಂಗವೆಂದರೆ ಪ್ರಧಾನವೆಂದಾಗಲಿ ಪರಮಾಣುವೆಂದಾಗಲಿ ತಿಳಿಯಲು ಅಭ್ಯಂತರವಿಲ್ಲ. ಕಾಣಬಾರದ ಎಂಬ ಪದದಿಂದ ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಗೋಚರವಾಗದೆಂದು ತಿಳಿಸಿ ಲಿಂಗವು ಕೇವಲ ಶಿವಶಾಸ್ತ್ರ ವೇದ್ಯವೆಂದು ನಿರೂಪಿಸಲ್ಪಟ್ಟಿತು.

"ಎನ್ನ ಕರಸ್ಥಲಕ್ಕೆ ಬಂದರೆ" ಎಂಬುದರಿಂದ ಅಧಿಕಾರಿಯೂ ಅಧಿಕಾರಿ ವಿಶೇಷಣ ವಾದ ಅನನ್ಯ ಶಿವಭಕ್ತಿಯೂ ವಿವರಿಸಲ್ಪಡುತ್ತವೆ. ಎನ್ನ ಎಂದರೆ ಸಂಸಾರಕ್ಕೆ ಹೇಸಿದ ಅಂಗನಯೆಂಬರ್ಥ. ಲಿಂಗಜಿಜ್ಞಾಸಕ್ಕೆ ಅಥವಾ ವಿಚಾರಕ್ಕೆ ಸಂಸಾರದಿಂದ ಪರಾಙ್ಮುಖನಾದ ಆತ್ಮನೆ ಅಧಿಕಾರಿ ಎಂಬುದು ಶಿವಾಗಮಂಗಳ ಅಭಿಪ್ರಾಯವು. ಮೃಗೇಂದ್ರದಲ್ಲಿ "ಯೇಷಾಂ ಶರೀರಿಣಾಂ ಶಕ್ತಿಃ ಪತತ್ಯ ವಿನಿವೃತ್ತಯೇ । ತೇಷಾಂತಲ್ಲಿಂಗಮೌತ್ಸುಕ್ಯಂ ಅ ಮುಕ್ತೌದ್ವೇಷೋಭವಸ್ಥಿತೌ" ಆವ ಜೀವನಿಗೆ ಈಶಾನುಗ್ರಹವೆಂಬ ದೃಢವಾದ ಶಕ್ತಿ ಪಾತವಾಗಿದೆಯೊ ಅವನ ಲಕ್ಷಣವು ಏನೆಂದರೆ ಸಂಸಾರ ಸ್ಥಿತಿಯಲ್ಲಿ ಹೇಯಬುದ್ಧಿಯು ಮತ್ತು ಮುಕ್ತಿಯಲ್ಲಿ ಲವಲವಿಕೆಯು ಮತ್ತು ಮುಕ್ತಿಯನ್ನು ಬೋಧಿಸುವ ಶಿವಶಾಸ್ತ್ರದಲ್ಲಿ ಶ್ರದ್ಧೆಯು. ಸೂಕ್ಷ್ಮಾಗಮದಲ್ಲಿ "ಕಾವಾಗತಿರ್ಮಮೇತ್ಯೇವಂ ಧ್ಯಾಯಮಾನೋ ದಿವಾನಿಶಂ" ನನ್ನ ಗತಿ ಆವುದು ಎಂದು ಹಗಲಿರುಳು ಚಿಂತಿಸುವನೆ ಅಧಿಕಾರಿ ಎಂದು ಹೇಳುವನು.

"ಕರಸ್ಥಲಕ್ಕೆ ಬಂದರೆ"ಎಂಬುದರಿಂದ ಪಡೆಯಬೇಕೆಂಬ ಉತ್ಕಟ ಇಚ್ಛೆಯು ಮತ್ತು ಆ ಇಚ್ಛೆಗೆ ಮೂಲವಾದ ಶಿವಭಕ್ತಿಯು ಸೂಚಿತವಾಗುತ್ತವೆ. ವಾಯುವೀಯದಲ್ಲಿ "ಬಹುನಾತ್ರ ಕಿಮುಕ್ತೇನ ಗುಹ್ಯಾದ್ಗುಹ್ಯತರಂ ಪರಂ। ಶಿವೇಭಕ್ತಿರ್ನಸಂದೇಹಸ್ತಯಾಯುಕ್ತೋ ವಿಮುಚ್ಯತೆ" ಬಹಳ ಹೇಳುವುದರಿಂದೇನು ಪ್ರಯೋಜನವು? ಅತಿಗುಹ್ಯವಾದುದೇನಂದರೆ ಶಿವಭಕ್ತಿಯು; ಆ ಶಿವಭಕ್ತಿಯುಳ್ಳವನು ಮುಕ್ತನಾಗುವನೆಂಬಲ್ಲಿ ಸಂದೇಹವಿಲ್ಲ. ಎಂದು ಶಿವಭಕ್ತಿಯು ಮುಕ್ತಿಗೆ ಮುಖ್ಯೋಪಾಯವೆಂದು ಹೇಳಿಯದೆ. ಭಕ್ತಿ ಎಂದರೆ ಶಿವನ ಮಾಹಾತ್ಮ್ಯವನ್ನರಿತು ಮಾಡುವ ಪ್ರೇಮವು. "ಮಾಹಾತ್ಮ್ಯಜ್ಞಾನಪೂರ್ವಸ್ತುಸ್ನೇಹೋಭಕ್ತಿರಿತಿ ಸ್ಥಿತಿಃ" ಆದುದರಿಂದ ಶಿವಭಕ್ತಿಯುಕ್ತನಾದ, ಶಿವನೊಡನೆ ಅವಿನಾಭಾವವನ್ನು ಬಯಸುವ ಮುಮುಕ್ಷುವೆ ಈ ಶಾಸ್ತ್ರಕ್ಕೆ ಅಧಿಕಾರಿಯು ಎಂಬರ್ಥವು ಸಿದ್ಧವಾಯಿತು. ಹಾಗು ಬಂದರೆ" ಎಂಬ ಶಬ್ದದಿಂದ ಲಿಂಗವು ಕರಸ್ಥಲಕ್ಕೆ ಬರುವುದು ಬಹುಲವಾದ ಪುಣ್ಯದ ಫಲವು. ಅಂದರೆ ಅನೇಕ ಜನ್ಮಗಳಲ್ಲಿ ಸಂಗ್ರಹಿಸಿದ ಪುಣ್ಯರಾಶಿಯು

CC-0. Jangamwadi Math Collection. Digitized by eGangotri

ಫಲವು ಎಂದು ಸೂಚಿತವಾಗುತ್ತದೆ. ವಾಯವೀಯದಲ್ಲಿ "ಏವಂಪ್ರಕ್ಷೀಣಪಾಪಸ್ಯ ಬಹುಭಿರ್ಜನ್ಮಭಿಃ ಕ್ರಮಾತ್। ಸಾಂಬೇಸರ್ವೇಶ್ವರೇ ಭಕ್ತಿರ್ಜ್ಞಾನಪೂರ್ವಾಪ್ರಜಾಯತೇ" ಅನೇಕ ಜನ್ಮಗಳಿಂದ ಕ್ರಮದಿಂದ ಪಾಪವು ಕ್ಷಯವಾಗಲಿಕ್ಕಾಗಿ ಆವನೊಬ್ಬನಿಗೆ ಸರ್ವೇಶ್ವರನಾದ ಅಂಬಿಕಾರಮಣನಲ್ಲಿ ಭಕ್ತಿಯುಂಟಾಗುವುದು. ಎಂದು ಹೇಳಿಯದೆ.

ಅವರ್ಣನೀಯವಾದ ನಿರುಪಮ ಸುಖಪ್ರಾಪ್ತಿಯೂ, ದುಃಖಾಭಾವವೂ ಈ ಶಾಸ್ತ್ರ ಸಮಧಿಗತ ಲಿಂಗಾಂಗ ಸಾಮರಸ್ಯಕ್ಕೆ ಫಲವು. "ಕರಸ್ಥಲಕ್ಕೆ ಬಂದರೆ ಕರಸ್ಥಲದಲ್ಲಿ ಲಿಂಗವು ನೆಲಗೊಂಡರೆ ಎಂಬುದರಿಂದ ಸಾಮರಸ್ಯವು ಅಂದರೆ ಅಂಗಲಿಂಗಗಳಿಗ ನಿತ್ಯಯೋಗವು ಸೂಚಿತವಾಗಿದೆ. ಸಾಮರಸ್ಯವೇ ಮುಕ್ತಿಯು. ಪರಿಶುದ್ಧೇನ ಮನಸಾ ನಿಯಮೇನ ದೃಢವ್ರತಃ। ಶಿವಸ್ಯಲಿಂಗಂ ಬಿಭ್ರಾಣಃ ಶಿವಮೇವಪ್ರಪದ್ಯತೇ॥ ಕೈವಲ್ಯಸಾರದಲ್ಲುದಾಹರಿಸಿದ ಶಿವರಹಸ್ಯ ಪರಿಶುದ್ಧವಾದ ಮನಸಿನಿಂದ ದೃಢವ್ರತನಾಗಿ ನಿಯಮದಿಂದ ಶಿವಲಿಂಗವನ್ನು ಧರಿಸುವಾತನು ಶಿವನನ್ನೆ ಹೊಂದುತ್ತಾನೆ. ಅದರಂತೆಯೆ ಅನುಭವ ಸೂತ್ರದಲ್ಲಿ; "ಸಮ್ಯಗ್ಯೋಗೋಽಹಿಸಂಯೋಗೋ। ಭವೇಲ್ಲಿಂಗಾಂಗಯೋಃಸದಾ। ಸಂಯೋಗ ಏವ ಸಾಯುಜ್ಯರೂಪಾ ಮುಕ್ತಿರ್ನಚಾಪರಾ॥" ಲಿಂಗಾಂಗಗಳ ದೃಢವಾದ ಯೋಗವೆ ಸಾಯುಜ್ಯ ಮುಕ್ತಿ ಎಂಬುದು ಬೇರೆಯದಲ್ಲ.

"ಹೇಳಲಮ್ಮ ಕೇಳಲಮ್ಮ" ಎಂಬ ಶಬ್ದಗಳಿಂದ ಮೇಲೆ ವಿವರಿಸಿದ ಲಿಂಗಾಂಗ ಸಾಮರಸ್ಯವೆಂಬ ಮುಕ್ತಿಯ ಸುಖವು ಅವರ್ಣನೀಯವಾದುದು ಎಂದು ಹೇಳಲ್ಪಟ್ಟು ಈ ವೀರಶೈವ ಶಾಸ್ತ್ರಕ್ಕೆ ಸಾಂಸಾರಿಕ ತಾಪನಿವೃತ್ತಿಯ ಪರಮಾನಂದವೆ ಪ್ರಯೋಜನವೆಂದು ಅಭಿಪ್ರಾಯವಾಗುತ್ತಿದೆ. ಮುಕ್ತಿಯು ಪರಮಪುರುಷಾರ್ಥವೆಂದು ಸಕಲಶಾಸ್ತ್ರ ಪ್ರವರ್ತಕರ ಅಭಿಪ್ರಾಯವು ಶಿವಭಕ್ತಶಿಖಾಮಣಿಯಾದ ಗೌತಮನು ನ್ಯಾಯ ಸೂತ್ರದಲ್ಲಿ. "ದುಃಖಜನ್ಮಪ್ರವೃತ್ತಿದೋಷ ಮಿಥ್ಯಾಜ್ಞಾನಾ ನಾಮುತ್ತರೋತ್ತರಾಪಾಯೇ ತದನಂತರಾಪಾಯಾದಪವರ್ಗಃ" ಎಂದು ಹೇಳಿರುವನು. ಅಂದರೆ ಆತ್ಮನು ಇಲ್ಲ ಎಂದೂ, ದೇಹವೆ ಆತ್ಮನೆಂದೂ ಮೊದಲಾಗಿ ಆತ್ಮವಿಷಯವಾಗಿಯೂ, ದುಃಖಮಯವಾದ ಸಂಸೃತಿಯು ಸುಖಮಯವೆಂದೂ, ಶಾಂತಿಸುಖಾನುಭವ ಮಯ ಮುಕ್ತಿಯು ಶೂನ್ಯವೆಂದೂ, ಸಂಸಾರ ಮುಕ್ತಿ ವಿಷಯವಾಗಿಯೂ ಇರುವ ಅಜ್ಞಾನವು ತತ್ತ್ವಜ್ಞಾನದಿಂದ ನಾಶವಾಗಲು ಅದರಿಂದ ಹುಟ್ಟುವ ರಾಗದ್ವೇಷ ಕಾಮಕ್ರೋಧಾದಿ ದೋಷಗಳು ನಾಶವಾಗುತ್ತವೆ. ದೋಷಗಳು ನಾಶವಾಗಲು ದೋಷಗಳಿಂ

CC-0. Jangamwadi Math Collection. Digitized by eGangotri

ದ ಹುಟ್ಟುತ್ತಿದ್ದ ಪುಣ್ಯ ಪಾಪ ಪ್ರವೃತ್ತಿಯು ಇಲ್ಲವಾಗುತ್ತದೆ. ಅದಿಲ್ಲದಾಗಲು ಅದರಿಂದಾಗುವ ಜನ್ಮವಿಲ್ಲವಾಗುತ್ತದೆ. ಪುಣ್ಯ ಪಾಪರೂಪ ಕರ್ಮಗಳಿಂದಲೆ ಜನ್ಮವು. ಜನ್ಮವು ಇಲ್ಲದಾಗಲು ದುಃಖವಿಲ್ಲದಾಗುವುದು ಜೀವನು ಎಂಭತ್ತು ಲಕ್ಷಯೋನಿಗಳಲ್ಲಿ ಹುಟ್ಟುತ್ತಲೂ ಸಾವುತ್ತಲೂ ಪಡುವ ದುಃಖವು ಅವರ್ಣನೀಯವಾಗಿದೆ, ಆ ದುಃಖವುನಿವಾರಣವಾಗುತ್ತಲು ಸ್ವಯಂ ಪ್ರಕಟವಾಗುವ ಆನಂದದ ಸುಗ್ಗಿಯು ಹೇಳಲು ಬಾರದು. ಕೇಳಲುಬಾರದು. ಸಾಂಸಾರಿಕ ದುಃಖವು ಆವರಿಸಿದಾಗ ಸಹ, ಕತ್ತಲೆಯಲ್ಲಿ ಮಿಂಚು ಹೊಳೆವಂತೆ ಕ್ಷಣಿಕವಾಗಿ ತೋರುವ ಪುತ್ರಲಾಭಾದಿ ಸುಖಗಳು ಎಷ್ಟೋ ಅವರ್ಣನೀಯ ವಾಗಿರಲು ಸರ್ವದುಃಖಗಳ ನಿವೃತ್ತಿ ಅಥವಾ ಅವಸಾನ ಎಂಬ ಮೋಕ್ಷವು ಅವರ್ಣನೀಯ ವಾದುದೂ ಶಬ್ದಶಕ್ತಿಯನ್ನು ಮೀರಿದುದೂ ಎಂಬಲ್ಲಿ ಸಂದೇಹವಿಲ್ಲ.

## ಪರವಸ್ತು ಶಕ್ತಿ ವಿಶಿಷ್ಟವು, ಲಿಂಗಾಂಗಗಳು ಶಕ್ತಿ ಭಕ್ತಿ ವಿಶಿಷ್ಟವು.

" ಗುಹೇಶ್ವರನೆಂಬ ಲಿಂಗ ನಿರಾಕಾರ· ಬಯಲು ಸಾಕಾರವಾಗಿ ಎನ್ನ ಕರಸ್ಥಲಕ್ಕೆ ಬಂದರೆ " ಎಂಬೀ ಶಬ್ದಗಳಿಂದ ಲಿಂಗವೆಂಬ ಪರವಸ್ತುವು ಶಕ್ತಿ ಸಮೇತವಾದುದೆಂದೂ, ಅಂಗನೆಂಬಾತ್ಮನು ಭಕ್ತಿ ಸಮೇತನು ಎಂದೂ ವ್ಯಕ್ತವಾಗುತ್ತದೆ. ಲಿಂಗ ಶಬ್ದವು ಶಕ್ತಿ ವಿಶಿಷ್ಟವಾದ ಶಿವತತ್ವವನ್ನು ಬೋಧಿಸುತ್ತದೆ. " ಲಿಂಗಂಶೈವಮಿದಂ ಸಾಕ್ಷಾಚ್ಛಿವಶಕ್ತ್ಯುಭಯಾತ್ಮಕಂ " ಸೂ. ಈ ಶಿವಲಿಂಗವು ಶಿವಶಕ್ತಿಗಳೆರಡರಿಂದಲು ಕೂಡಿದುದು. ನಿರಾಕಾರವಾದ ವಸ್ತುವು ಸಾಕಾರವಾಗಿ ಎಂಬುದರಿಂದ ಶಿವಶಕ್ತಿಗಳೆರಡು ಅನ್ಯೋನ್ಯಸಮರಸಭಾವದಿಂದವೆಯೆಂದು ತಿಳಿಯುತ್ತಿದೆ. ನಿರಾಕಾರ ವಸ್ತುವು ಮಹಾಸ್ಥಲವೆಂದೂ ಪರಸ್ಥಲವೆಂದೂ ಸಂಜ್ಞೆಯುಳ್ಳದಾಗಿದೆ. " ಪರನಿರ್ವಾಣ ನಿಷ್ಠಾನಾಂಯದ್ಭವೇತ್ಪರಮಂಪದಂ। ತದಾಹುಃಸ್ಥಲಮದ್ವೈತಂಶಿವಜ್ಞಾನೈಕತತ್ಪರಾ ॥ " ಸಂಸಾರದ ಉಪಶಮನವೆಂಬ ಪರನಿರ್ವಾಣದಲ್ಲಿ ನಿಷ್ಠೆಯುಳ್ಳವರು ಆವುದಾನೊಂದು ಸ್ಥಾನವನ್ನು ತಂಮ ಅಂತಿಮಪದವೆಂದು ನೆನೆವರೊ ಅದಕ್ಕೆ ಶಿವಜ್ಞಾನದಲ್ಲಿ ತಾತ್ಪರ್ಯವುಳ್ಳ ಯೋಗಿಗಳು ದ್ವೈತರಹಿತವಾದ ಸ್ಥಲವೆನ್ನುವರು. ಇಂತಪ್ಪ ಶಿವತತ್ತ್ವದಲ್ಲಿ ಆ ಶಿವತತ್ತ್ವದಸ್ವವಿಮರ್ಶ, ರೂಪವಾದ ಅಂದರೆ ತನ್ನ ಸ್ವರೂಪದ ಎಚ್ಚರವೆಂಬ ಶಕ್ತಿಯುಂಟು. ಆ ಶಕ್ತಿ ಇದ್ದುದರಿಂದಲೆ ಶಿವನು ಸ್ವತಃ ಸಿದ್ಧನೆನಿಸುವನು

ಜಗತ್ತಿನಲ್ಲಿರುವ ಪದಾರ್ಥಗಳಲ್ಲಿ ಸ್ವಾನುಭವ ಅಥವಾ ಸ್ವವಿಮರ್ಶವೆಂಬುದು ಇಲ್ಲದರಿಂದ ಅವು ಜಡವೆನಿಸುತ್ತವೆ. ತಂಮ ಅಸ್ತಿತ್ವದ ವಿಷ

CC-0. Jangamwadi Math Collection. Digitized by eGangotri

ಯಕ್ಕೆ ಬೇರೆ ಪ್ರಮಾಣವನ್ನು ಅವಲಂಬಿಸುತ್ತವೆ. ಹೇಗೆಂದರೆ ಈ ಜಗತ್ತಿನಲ್ಲಿ ತೋರುವ ಆಕಾಶಾದಿ ಪಂಚಭೂತಗಳಿಗೆ ಸ್ವವಿಮರ್ಶ ಅಥವಾ ಸ್ವಾನುಭವವು ಇಲ್ಲದರಿಂದ ಅವುಗಳು ಅವೆಯೆಂದು ತಿಳಿಯಲಿಕ್ಕೆ ಪ್ರಮಾತೃ ಎಂದರೆ ಅವುಗಳನ್ನು ತಿಳಿಯತಕ್ಕವನೊಬ್ಬನೂ ಆ ತಿಳಿಯತಕ್ಕವನಿಗೆ ಬುದ್ಧಿ ಚಿತ್ತಾದಿ ಅಂತಃಕರಣವೂ ಬೇಕು. ಪರಮಾತ್ಮನು ಸ್ವವಿಮರ್ಶದಿಂದಲೆ ಸ್ವಾನುಭೂತಿಯಿಂದಲೆ ಸಿದ್ಧನಾಗಿರುವುದರಿಂದ ಸ್ವತಃ ಸಿದ್ಧನಾಗಿಹನು. ಪರಮಾತ್ಮನ ಅನುಭೂತಿಯು ಸಚ್ಚಿದಾನಂದಾತ್ಮಕವಾದ ಪರಮಾತ್ಮನಂತೆಯೆ ಸಚ್ಚಿದಾನಂದ ಮಯವಿಹುದು. ಇದನ್ನೆ ಸೂಕ್ಷ್ಮಾಗಮದಲ್ಲಿ 'ಅಸ್ತಿ ಕಶ್ಚಿತ್ ಸ್ವತಃ ಸಿದ್ಧಃ ಸಚ್ಚಿದಾನಂದ ಲಕ್ಷಣಃ" ಸಚ್ಚಿದಾನಂದ ಸ್ವರೂಪನಾದ ಅವರ್ಣನೀಯನಾದ ಒಬ್ಬನು (ಶಿವನು) ಇರುವನು. ಅವನು ಸ್ವತಃ ಸಿದ್ಧನು ಅಂದರೆ ಅವನ ಅಸ್ತಿತ್ವಕ್ಕೆ ಬಾಹ್ಯವಾದ ಪ್ರಮಾಣಗಳ ಅಪೇಕ್ಷೆಯು ಇಲ್ಲ ಎಂದು ಹೇಳಿಯದೆ.

ಹೀಗೆ ಸ್ವಶಕ್ತಿ ವಿಶಿಷ್ಟವಾದ ನಿರಾಕಾರವಸ್ತುವು ಭಕ್ತರ ಉದ್ಧಾರಕ್ಕೆ ಉಪಾಸನೆಗೆ ತಕ್ಕ ಆಕಾರವನ್ನು ಹೊಂದಿತೆಂಬ ರಹಸ್ಯವನ್ನು ಅಲ್ಲಮನು ನಿರಾಕಾರಬಯಲು ಸಾಕಾರವಾಗಿ ಎಂಬ ನುಡಿಗಳಿಂದ ತೋರಿಸುವನು. "ನಿರಾಕಾರ ಬಯಲು" ಎಂದರೆ ಸರ್ವಕ್ಕೆ ಆಧಾರವಾದ ಸ್ಥಲವೆಂಬರ್ಥ. ಬಯಲು ಸಮಸ್ತಕ್ಕೆ ಆಧಾರವು. ಅದು ಆಕಾರವಾಗಲಿಕ್ಕೆ ಹೊರಗಿನ ದಾವುದೊಂದು ಕಾರಣವಿಲ್ಲ. ಏಕೆಂದರೆ ಅದಕ್ಕೆ ಬಾಹ್ಯವಾದ ಪದಾರ್ಥವೆ ಇಲ್ಲ. ಅದು ನಿರಾಕಾರ ಬಯಲು ಸರ್ವವನ್ನು ಒಳಗೆ ಕೊಂಡುದು. ಆದುದರಿಂದ ತನ್ನ ಶಕ್ತಿಯ ಸ್ವಾತಂತ್ರ್ಯದಿಂದ ಪರಮಾತ್ಮನು ರೂಪನ್ನಂಗೀಕರಿಸಿದನು. ಸುಪ್ರಭೇದದಲ್ಲಿ "ಯತೀನಾಂಮಂತ್ರಿಣಾಂ ಚೈವಜ್ಞಾನಿನಾಂ ಯೋಗಿನಾಂ ತಥಾ । ಧ್ಯಾನಪೂಜಾನಿಮಿತ್ತಂಹಿತನುಂ ಗೃಹ್ಣಾತಿಮಾಯಯಾ" ನಿರಾಕಾರದಲ್ಲಿ ಧ್ಯಾನಪೂಜೆಗಳನ್ನು ಮಾಡಲಿಕ್ಕವಕಾಶವಿಲ್ಲೆಂದು ಪರಶಿವನು ಯತಿಗಳ, ಮಂತ್ರಸಾಧಕರ, ಜ್ಞಾನಿಗಳ ಮತ್ತು ಯೋಗಿಗಳ ಧ್ಯಾನಪೂಜೆಗಳಿಗಾಗಿ ಮಾಯೆಯಿಂದ ಆಕಾರವನ್ನು ಗ್ರಹಿಸುತ್ತಾನೆ. ಇಲ್ಲಿ ಮಾಯೆಯೆಂದರೆ ಪರಶಕ್ತಿಯು. "ಅಸ್ತಭ್ನಾತ್ ಮಾಯಯಾ ದ್ಯಾಮವಸ್ತ್ರಸಃ" ಜಾರಿಬೀಳದಂತೆ ದ್ಯುಲೋಕವನ್ನು ಪ್ರಜ್ಞಾಶಕ್ತಿಯಿಂದ ಪರಮೇಶ್ವರನು ಎತ್ತಿ ನಿಲ್ಲಿಸಿದನು. (ಋ. ೨-೧೭-೫) ಎಂಬಲ್ಲಿ ಮಾಯಾ ಶಬ್ದಕ್ಕೆ ಸಾಯಣಾಚಾರ್ಯನು ಪ್ರಜ್ಞೆಯೆಂದು ಅರ್ಥವನ್ನು ಹೇಳಿರುವನು. ಆದುದರಿಂದ ನಿರಾಕಾರನಾದ ಪರಶಿವನು ತನ್ನ ಶಕ್ತಿಯಿಂದ ಆಕಾರವನ್ನು ತಾಳಿದನು, ಎಂಬರ್ಥವು.

CC-0. Jangamwadi Math Collection. Digitized by eGangotri

ಉಪಾಸ್ಯರೂಪವನ್ನು ತಾಳಿದಂತೆ ಶಿವನು ಉಪಾಸಕ ರೂಪವನ್ನೂ ಶಕ್ತಿವಿಲಾಸದಿಂದಲೆ ಧರಿಸಿದನು. ನಿರಾಕಾರವಲ್ಲಿ ಉಪಾಸ್ಯೋಪಾಸಕಗಳೆರಡೂ ಇದ್ದುದರಿಂದ, ಅದರಲ್ಲಿ ಉಪಾಸ್ಯ ರೂಪವು ತೋರಲು ಉಪಾಸಕ ರೂಪವಾದರು ಅಲ್ಲಿಯೇ ಪ್ರಕಟವಾಯಿತು. ಇದನ್ನು ಅನುಭವ ಸೂತ್ರದಲ್ಲಿ ಶಿವವಾಕ್ಯಗಳಿಂದಲೆ ಮಾಯಿ ವಿಭುವು ತೋರಿಸಿರುವನು. "ಸ್ಥಲಂ ನಾಮಪರಂ ತತ್ತ್ವಂ ಶಿವರುದ್ರಾದಿಸಂಜ್ಞಕಂ । ಉಪಾಸ್ಯೋಪಾಸಕತ್ವೇನ ಸ್ವಯಮೇವದ್ವಿಧಾಭವೇತ್ । ಲಿಂಗಸ್ಥಲಮುಪಾಸ್ಯಂ ಸ್ಯಾದಂಗ ಸ್ಥಲಮುಪಾಸಕಂ । ಉಪಾಸ್ಯತ್ವಂ ತಥೋಪಾಸಕತ್ವಂಚ ಪರಮಃಶಿವಃ । ಅಪ್ರಚ್ಯುತಾತ್ಮಭಾವೇನ ಸ್ಥಿತಃ ಸನ್ನಾತ್ಮಲೀಲಯಾ ॥ ಸ್ವಶಕ್ತ್ಯಾಯುಗಪತ್ಸಾಕ್ಷಾತ್ಪ್ರಾಪ್ತಏವ ಸ್ವಯಂ ಕ್ರಮಾತ್ ॥ ನಾಶಿವಸ್ಯಶಿವೋಪಾಸ್ತಿರ್ಘಟತೇಜನ್ಮಕೋಟಿಭಿಃ ಶಿವಸ್ಯೈವಶಿವೋಪಾಸ್ತಿ ರಿತಿ ನಾನಾಶ್ರುತಿಸ್ಥಿತಿಃ ॥ " ಸ್ಥಲವೆಂದು ಪ್ರಸಿದ್ಧವಿರುವ ಪರತತ್ತ್ವವು ಶಿವನೆಂದೂ ರುದ್ರನೆಂದೂ ಹೆಸರನ್ನುಳ್ಳುದು. ಅದು ತಾನೇ ಉಪಾಸಕನೆಂದೂ ಉಪಾಸ್ಯನೆಂದೂ ಎರಡು ವಿಧವಾಯಿತು. ತನ್ನ ಲೀಲೆಯಿಂದ ಈ ವಿಧವಾಗಿ ಎರಡು ತೆರನಾದರು ಆತ್ಮಭಾವಕ್ಕೆ ಚ್ಯುತಿಯಾಗಲಿಲ್ಲ; ಅಂದರೆ ವಿಕಾರವು ತೋರಲಿಲ್ಲ. ಲಿಂಗತತ್ತ್ವವೆ ಉಪಾಸ್ಯವು ಅಂಗತತ್ತ್ವವೆ ಉಪಾಸಕವು. ಶಕ್ತಿಯ ಮಹಿಮೆಯಿಂದ ತಾನೆ ಲೀಲೆಯಿಂದ ಉಪಾಸ್ಯೋಪಾಸಕವಾಯಿತು. ಶಿವನಲ್ಲದವನು ಕೋಟಿಜನ್ಮಗಳಲ್ಲಿ ತಿರುಗಿದರು ಶಿವೋಪಾಸಕನಾಗಲಾರನು.

## ಲಿಂಗಾಂಗೈಕ್ಯ

ಇದನ್ನೆಲ್ಲ ಗರ್ಭೀಕರಿಸಿ ಪ್ರಭುವು, "ಗುಹೇಶ್ವರನೆಂಬ ಲಿಂಗನಿರಾಕಾರ ಬಯಲು ಸಾಕಾರವಾಗಿ ಎನ್ನ ಕರಸ್ಥಲಕ್ಕೆ ಬಂದರೆ" ಎಂದು ನುಡಿದಿರುವನು. ಇಲ್ಲಿ ಗುಹೇಶ್ವರನು ನಿರಾಕಾರ ಬಯಲು ಎಂದುಹೇಳಿದೆಯಾದರು, ಎನ್ನ ಎಂಬ ಉಪಾಸಕನನ್ನು ಗುಹೇಶ್ವರನಿಂದ ಬೇರೆಯಾಗಿಯೆ ಪ್ರಭುವು ಹೇಳಿರುವನು. ಆದರಿಂದ ಲಿಂಗಾಂಗಗಳ ಭೇದವು ಕಾಣುತ್ತದೆಂದು ಶಂಕಿಸಲಾಗದು:

"ಗುಹೇಶ್ವರನೆಂಬ" ಎಂಬೀಶಬ್ದಗಳಿಂದ ಲಿಂಗಾಂಗಗಳನ್ನು ಒಳಗೊಂಡ ಪರಸ್ಥಲವೆ ಪ್ರಭುವಿನಿಂದ ನಿರೂಪಿಸಲ್ಪಟ್ಟಿದೆ. ಹೇಗಂದರೆ ಗುಹ ಎಂಬ ಶಬ್ದವು ಗುಹ ಧಾತುವಿಗೆ "ಇಗು ಪಧಜ್ಞಾಪ್ರೀಕಿರಃ ಕಃ ಎಂಬ ಸೂತ್ರದಿಂದ ಕ ಪ್ರತ್ಯಯು ಪರವಾಗಿ ನಿಷ್ಪನ್ನವಾಗಿದೆ. ಗುಹ ಧಾತುವು ಸಂಸ್ಕೃತಿಯಲ್ಲಿ ಪರ್ಸ ಸುತ್ತಿದೆ. ಸಂವರಣವು ಶಕ್ತಿಯಲ್ಲಿಯೂ

CC-0. Jangamwadi Math Collection. Digitized by eGangotri

ವ್ಯಾಪ್ತಿಯಲ್ಲಿಯೂ ನಡೆಯುತ್ತದೆ. ವ್ಯಾಪ್ತಿಯೆಂದರೆ ಹಬ್ಬುವಣ-ಹಬ್ಬು ವಣವೆಂದರೆ ಬಯಲಾಗಿರುವಣ. ಬಯಲಾದುದೆ ಆಶ್ರಯವಾಗುತ್ತಿದೆ. ಸ್ಥಲಶಬ್ದವೂ ಆಶ್ರಯವಾಚಕವಾಗಿದೆ. ಆದುದರಿಂದ ಗುಹನೆಂದರೆ ಸ್ಥಲವೆಂಬರ್ಥ. ಈಶ್ವರಶಬ್ದವು "ಅಶ್ನೋತೇರಾಶುಕರ್ಮಣಿ ವರಟ್ ಚ" ಎಂಬ ಸೂತ್ರದಿಂದ ಅಶ ಎಂಬ ವ್ಯಾಪ್ತಿಬೋಧಕ ಧಾತುವಿಗೆ ವರಟ್ ಪ್ರತ್ಯಯವುಹತ್ತಿ ಆಗಿದೆ. ಕೇವಲ ಗುಹ ಶಬ್ದವನ್ನುಪಯೋಗಿಸಿದರೆ ವಿಶ್ವಕ್ಕೆ ಆಶ್ರಯವಾದ ವಸ್ತು ಜಡವಾದರು ಆಗಬಹುದೆಂಬ ಶಂಕೆಗಾಸ್ಪದ ವಿದೆ. ಈಶ್ವರ ಪದದಿಂದ ವ್ಯಾಪಕದ ಜಡತ್ವವು ಹೋಗಿ ನಿಯಾಮಕತ್ವದ ಬೋಧವಾಗುತ್ತಿದೆ. ಆದುದರಿಂದ ಗುಹೇಶ್ವರನೆಂಬ ಪದದಿಂದ ವಿಶ್ವಾಧಾ ರವಾಗಿಯೂ ವಿಶ್ವನಿಯಾಮಕವಾಗಿಯೂ ಒಪ್ಪುವ ವಸ್ತುವಾದುದು ಹೇಳ ಲ್ಪಡುತ್ತದೆ, ಇಂತಪ್ಪ ವ್ಯಾಪಕನಿಯಾಮಕ ವಸ್ತುವಿನಿಂದಲೆ ಸರ್ವವಿಶ್ವವು ಸೃಷ್ಟವಾಗಬಹುದಾದುದರಿಂದ ಆ ವಿಶ್ವವು ಅದರ ಶಕ್ತಿಯಲ್ಲಿ ತಾದ್ಯಾತ್ಮ ನಿಂದ ಇರುವುದೆಂಬರ್ಥವು ದ್ಯೋತಿತವಾಗುತ್ತದೆ.

ಈಶ್ವರಶಬ್ದವನ್ನು "ಸ್ಥೇಶಭಾಸಪಿಸಕಸೋವರಚ್" ಎಂಬ ಸೂತ್ರ ದಿಂದ ಈಶ ಧಾತುವಿಗೆ ವರಚ್ ಎಂಬ ಪ್ರತ್ಯಯದಿಂದ ಮಾಡಿದರು ಇದೇ ಅರ್ಥವು ಸಿಪ್ಪನ್ನವಾಗುತ್ತದೆ. ಆಗ ಗುಹ ಎಂದರೆ ವಿಶ್ವಾಧಾರನಾಗಿ ಈಶ್ವರ ಎಂದರೆ ವಿಶ್ವನಿಯಾಮಕನಾದವನು ಎಂಬರ್ಥವು. ಇಂತು ಗು ಹೇಶ್ವರ ಶಬ್ದವು ಶಕ್ತಿ ವಿಶಿಷ್ಟ ಶಿವತತ್ತ್ವವನ್ನು ತಿಳುಹುತ್ತದೆ. ಅಂತಪ್ಪ ವಸ್ತುವಿನಿಂದಲೆ ಉಪಾಸ್ಯ ಪಾಸಕಗಳೆಂಬ ಲಿಂಗಾಂಗಗಳು ಆತ್ಮ ಸ್ವಭಾವಕ್ಕೆ ಅಂದರೆ ಪರಸ್ಥಳವೆಂಬ ವಸ್ತುವಿನ ಸ್ವಭಾವಕ್ಕೆ ಚ್ಯುತಿ ಇಲ್ಲದೆ ಅನಾದಿ ಯಿಂದ ಪ್ರಕಟವಾದುವು.

## ಷಡಂಗಲಿಂಗಗಳು ಷಡ್ಭಕ್ತಿಕಲೆಗಳು.

ತನ್ನನಾಶ್ರಯಿಸುವ ಮುಮುಕ್ಷುಗಳಿಗೆ ಬೋಧಿಸುವ ಆಚಾರಾದಿ ಮಹಾ ಲಿಂಗಾಂತವಾದ ಆರುಲಿಂಗಗಳ ಮತ್ತು ಭಕ್ತಾದಿ ಐಕ್ಯಾಂತವಾದ ಆರು ಅಂಗಗಳ ಸ್ವರೂಪವು ಪ್ರಭುವಿನ ಈ ವಾಕ್ಯದಲ್ಲಿ ಅಡಕವಾಗಿದೆ. ಹೇಗೆಂದರೆ:—

"ಎನ್ನ ಕರಸ್ಥಲಕ್ಕೆ ಬಂದರೆ" ಎಂಬಲ್ಲಿ ಭಕ್ತಮಹೇಶಪ್ರಸಾದಿಗ ಳೆಂಬ ಮೂರು ಅಂಗಸ್ಥಳಗಳೂ ಆಚಾರಗುರುಶಿವಲಿಂಗಗಳೆಂಬ ಮೂರು ಲಿಂಗಸ್ಥ[illegible]

CC-0. Jangamwadi Math Collection. Digitized by eGangotri

"ಬಂದರೆ ಎಂಬಲ್ಲಿ ಉತ್ಕಟವಾದ ಇಚ್ಛೆಯು ದ್ಯೋತಿತವಾಗಿದೆಂದು ಮೇಲೆ ಹೇಳಿದ್ದೇನೆ ಈ ಲಿಂಗಧಾರಣದ ಇಚ್ಛೆಯಲ್ಲಿ ಸಂಸಾರ ಹೇಯವು ಗರ್ಭಿತವಾಗುತ್ತದೆ. ಸಂಸಾರ ಹೇಯದಿಂದ ಆಚಾರಾಭಿಮುಖತ್ವವೂ ಗುರೂಪಸರ್ಪಣವೂ ಫಲಿತವಾಗಿವೆ ಆಚಾರಲಿಂಗ ಗುರುಲಿಂಗಗಳು ಇದರಿಂದ ಬಂದುವು. ಮತ್ತು ಭಕ್ತಮಾಹೇಶ ಸ್ಥಳಗಳು ಸಮಾವೇಶವಾದವು ಶ್ರದ್ಧಾ ನಿಷ್ಠಾ ಭಕ್ತಿಗಳು ಒಡನೆ ಬಂದುವು. ಆಚಾರಪರನಾಗಿರುವುದೆ ಆಚಾರ ಲಿಂಗಭಕ್ತಿ-ಇದಕ್ಕೆ ಶ್ರದ್ಧೆಯು ಕಾರಣವು. ಶ್ರದ್ಧೆ ಇಲ್ಲದೆ ಆಚಾರವು ಬಾರದು ಲಿಂಗಧಾರಣಕ್ಕಾಗಿ ಗುರುವಿನುಪಸರ್ಪಣವೆ ಗುರುಭಕ್ತಿ. ಇದಕ್ಕೆ ನಿಷ್ಠೆಯು ಹೇತುವು. ಶಿವಶಾಸ್ತ್ರದಲ್ಲಿ ನಿಷ್ಠೆ ಇಲ್ಲದೆ ಅದರಲ್ಲಿ ಹೇಳಿದ ಲಿಂಗಧಾರಣದ ಇಚ್ಛೆಯಾಗದು. "ಕರಸ್ಥಲಕ್ಕೆ" ಎನ್ನುವುದರಿಂದ ಶಿವಲಿಂಗವು ಬಂದಿತು ಶಿವಲಿಂಗವೆ ಇಷ್ಟಲಿಂಗವು. ಅವಧಾನ ಭಕ್ತಿಯು ಅದರೊಡನೆ ನಿಷ್ಪನ್ನವಾಯ್ತು. ಅವಧಾನವೆಂದರೆ ಎಚ್ಚರವು. ಕರಸ್ಥಲಗತವಾದ ಇಷ್ಟ ಲಿಂಗವನ್ನು ಸಾಂಸಾರಿಕ ವೃತ್ತಿಗಳಲ್ಲಿ ಮನವೆರಗಿಸದೆ ಎಚ್ಚರದಿಂದ ನಿರೀಕ್ಷಿಸದೆ ಇಷ್ಟಲಿಂಗವು ಗೋಚರಿಸದು.

ಈ ಲಿಂಗಗಳ ಶಕ್ತಿಗಳೆ ನಿವೃತಿ ಪ್ರತಿಷ್ಠಾ ವಿದ್ಯಾಕಲೆಗಳು. ನಿವೃತ್ತಿ ಕಲೆಯು ಅಂಗವನ್ನು ಸಂಸೃತಿಯಿಂದ ನಿವೃತ್ತಿಗೊಳಿಸಿ, ಶಿವಾಭಿಮುಖನನ್ನು ಮಾಡುತ್ತದೆ ಇದು ಆಚಾರಲಿಂಗದ ಶಕ್ತಿಯು ಪ್ರತಿಷ್ಠಾಕಲೆಯು ನಿವೃತ್ತಿಮುಖನಾದ ಅಂಗವನ್ನು ಶಿವನಲ್ಲಿ ಪ್ರತಿಷ್ಠೆಗೊಳಿಸುತ್ತದೆ. ಇದು ಗುರುಲಿಂಗದ ಶಕ್ತಿಯು ವಿದ್ಯಾಕಲೆಯು ಶಿವನಲ್ಲಿ ನೆಲೆಗೊಂಡ ಅಂಗವನ್ನು ಶಿವರೂಪ ಧವಳದ ವಿಚಾರವನ್ನು ಮಾಡಹಚ್ಚುತ್ತದೆ. ಇದು ಶಿವಲಿಂಗ ಶಕ್ತಿಯು. ಆದುದರಿಂದ ಇಲ್ಲಿಯವರೆಗೆ ನಿವೃತ್ತಿ ಪ್ರತಿಷ್ಠಾ ವಿದ್ಯಾಕಲೆಗಳೂ ಅವುಗಳ ಪರಿಣಾಮವಾದ ಶ್ರದ್ಧಾ ನಿಷ್ಠಾ ಅವಧಾನಗಳೂ ಬಂದವು. ಮೊದಲಿದ ಮೂರು ಕಲೆಗಳು ಲಿಂಗವನ್ನು, ಶ್ರದ್ಧಾ ನಿಷ್ಠಾ ಅವಧಾನಗಳು ಅಂಗವನ್ನು ಆಶ್ರಯಿಸುತ್ತವೆ.

"ಹೇಳಲಮ್ಮೆ ಕೇಳಲಮ್ಮೆ" ಎಂಬಲ್ಲಿ ಜಂಗಮಲಿಂಗ ಪ್ರಸಾದಲಿಂಗ ಮಹಾಲಿಂಗಗಳೂ ಪ್ರಾಣಲಿಂಗಿ ಶರಣ ಐಕ್ಯರೂ ಅಂತರ್ಭಾವವನ್ನು ಹೊಂದಿವೆ ಹೇಗೆ? "ಹೇಳಲಮ್ಮೆ ಕೇಳಲಮ್ಮೆ" ಎಂಬುವ ನುಡಿಗಳು ಶಿವಜ್ಞಾನವು ವಾಙ್ಮನಸಗೋಚರವೆಂದು ತೋರಿಸುತ್ತಿವೆ. ಅವಧಾನ ಭಕ್ತಿಯಿಂದ ಬಾಹ್ಯ ವಿಷಯಗಳಿಂದ ಇಂದ್ರಿಯಗಳನ್ನು ತಿರುಗಿಸಿ ಅಂತರದಲ್ಲಿ ಮನಸಿನ ವೃತ್ತಿಯನ್ನು ತಿರುವಿದ ಮಹಿಮನಿಗೆ ಆತ್ಮನಿಂದನನ್ಯವಾದ ಶಿವಾನುಭವವು

CC-0. Jangamwadi Math Collection. Digitized by eGangotri

ಆಗುತ್ತದೆ. ಮತ್ತು ಅಂತರಾನಂದವು ವ್ಯಕ್ತವಾಗ ಹತ್ತುತ್ತದೆ. ಈ ಅನುಭವವೂ ಈ ಆನಂದವೂ ಹೇಳಲಿಕ್ಕೆ ಬರುವುವಲ್ಲ. ಹೊರಗಿನ ವಿಷಯಗಳಿಂದ ಪರಾಙ್ಮುಖನಾಗಿಯೆ ಈ ಅನುಭವವು ಆಗುವುದರಿಂದ ಹೊರಗೆ ಹರಿಯುವವಾದ ಇಂದ್ರಿಯಗಳಿಂದ ಹೇಳಲಿಕ್ಕೆ ಬರಲಾರವು. ಹೇಳಲಿಕ್ಕೆ ಬಾರದ ಅನುಭವಾನಂದಗಳನ್ನು ಅಂಗನು ಸ್ತಿಮಿತನಾಗಿ ಅಥವಾ ನಿಶ್ಚಲನಾಗಿ ಆ ಆನಂದದಲ್ಲಿ ಮಗ್ನನಾಗಿ ಸಾಮರಸ್ಯದಿಂದ ಅನುಭವಿಸುವನು. ಇವು ಅನುಭವ ಆನಂದ ಸಮರಸ ಭಕ್ತಿಗಳೆನಿಸುತ್ತವೆ.

ಈ ಭಕ್ತಿಗಳು ಪ್ರಾಣಲಿಂಗಿ ಶರಣ, ಐಕ್ಯರೆಂಬ ಅಂಗನನ್ನು ಆಶ್ರಯಿಸಿವೆ. ಜೀವನು ದೇಹಪ್ರಾಣಗಳನ್ನು ಅಭಿಮಾನಿಸಿ ಲೌಕಿಕ ವಸ್ತುಗಳನ್ನು ಅನುಭವಿಸುವಂತೆ ಲಿಂಗಪ್ರಾಣಿಯು ಈ ಅನುಭವವನ್ನು ಹೊಂದುವದರಿಂದ ಅನುಭವಭಕ್ತಿಯು ಪ್ರಾಣಲಿಂಗಿ ಸ್ಥಳವನ್ನಾಶ್ರಯಿಸಿದೆ. ಇಂದ್ರಿಯ ಸಂಗದಿಂದ ಪ್ರಾಪ್ತವಾಗುವ ಆನಂದದಲ್ಲಿ ಜೀವನು ಮಗ್ನನಾಗಿ ಆ ಲೌಕಿಕ ಸುಖಗಳಲ್ಲಿಯೆ ರಮಿಸುತ್ತಾನೆ ಕಿಂಬಹುನಾ ತದೇಕಶರಣನಾಗುತ್ತಾನೆ. ಅಂಗನು ಶಿವಾನುಭವದ ಆನಂದವನ್ನು ಆಸ್ವಾದಿಸಿ ಆ ಆನಂದದಲ್ಲಿಯೆ ಮನನೆರಕವಾಗಿ ತದೇಕ ಶರಣನಾಗುವುದರಿಂದ ಶರಣಸ್ಥಲವನ್ನಾಶ್ರಯಿಸಿ ಆನಂದ ಭಕ್ತಿಯುಂಟು. ಈ ಆನಂದದಲ್ಲಿ ಅಂಗನು ಬಾಹ್ಯ ಕರಣಗಳೂ ಅಂತಃಕರಣವೂ ಇಲ್ಲದೆ ಮಗ್ನನಾಗುವುದರಿಂದ ಅದನ್ನು ಸಾಮರಸ್ಯದಿಂದಲೆ ಅನುಭವಿಸುವನು. ಇದೆ ಸಾಮರಸ್ಯ ಭಕ್ತಿಯು. ಐಕ್ಯಸ್ಥಲಕ್ಕೆ ಹೊಂದಿದುದು.

ಅನುಭವ ಭಕ್ತಿಯು ಜಂಗಮ ಲಿಂಗವನ್ನು ಉಪಾಸಿಸುವಲ್ಲಿ ಅಂಗನಿಗೆ ಸಾಧನವಾಗಿದೆ. ಮೇಲೆ ವಿದ್ಯಾಕಲೆಯಿಂದ ಶಿವಸ್ವರೂಪದಲ್ಲಿ ಅವಧಾನ ಉಂಟಾದುದನ್ನು ಹೇಳಿದೆನು. ಈ ಅವಧಾನದಿಂದ ಶಾಂತಿಯೆಂಬುದು ಪ್ರಕಟವಾಯಿತು. ಶಾಂತಿಯುಂಡಲೆ ಅನುಭವವು. ಶಾಂತಿಯೆಂದರೆ ಲಿಂಗಾನುಸಂಧಿಯಿಂದ ಅಂಗನೆಂಬ ಆತ್ಮನು ಅತ್ತಿತ್ತ ಚಲಿಸದಿರುವುದಕ್ಕೆ ಕಾರಣವಾದುದು. ಇದು ಜಂಗಮಲಿಂಗವನ್ನಾಶ್ರಯಿಸಿದೆ. ಜಂಗಮಲಿಂಗವೆಂದರೆ ಕರಗತ ಇಷ್ಟಲಿಂಗವೆ ನಿರ್ನಿಮೇಷ ಧ್ಯಾನದಿಂದ ಸರ್ವ ಇಂದ್ರಿಯಗಳನ್ನು ವ್ಯಾಪಿಸಿರುವುದು. ಗಮ ಧಾತುವಿನಿಂದ ಈ ಜಂಗಮ ಶಬ್ದವಾಗಿದೆ. ಜಂಗಮ ಶಬ್ದವು ಅತ್ಯಂತ ಗತಿ ಸ್ವಭಾವವುಳ್ಳುದರಲ್ಲಿ ನಡೆಯುತ್ತದೆ. ಸಕಲೇಂದ್ರಿಯಗಳನ್ನು ವ್ಯಾಪಿಸಿದ ಶಿವಲಿಂಗವು ಜಂಗಮಶಬ್ದಕ್ಕೆ ತಕ್ಕುದಾಗಿದೆ. ಇಂದ್ರಿಯಗಳಲ್ಲಿ ವ್ಯಾಪಿಸಿದ ಶಿವಚೈತನ್ಯವು ಪ್ರಕಟವಾಗುತ್ತಲು

CC-0. Jangamwadi Math Collection. Digitized by eGangotri

ಅವುಗಳು ಚಂಚಲತ್ವವನ್ನು ನೀಗುವುದರಿಂದ ಶಾಂತಿ ಕಲೆಯು ಜಂಗಮ ಲಿಂಗದ ಶಕ್ತಿಯು.

ಈ ಶಾಂತಿ ಕಲೆಯಿಂದ ಅನುಭವನಿಷ್ಠನಾದ ಅಂಗನು ಪ್ರಸಾದ ಲಿಂಗವನ್ನು ಕ್ರಮೇಣ ಅರಿಯುವನು. ಪ್ರಸಾದಲಿಂಗವೆಂದರೆ ಸಂಸೃತಿಯ ಕಶ್ಮಲವಿಲ್ಲದ ಮತ್ತು ಸಂಸಾರದುಃಖಗಳ ತೆರೆಗಳಿಲ್ಲದ ಗಂಭೀರ ಶಿವಸುಖವು. ಈ ಲಿಂಗಕ್ಕೆ ಶಾಂತ್ಯತೀತೆಯು ಕಲೆಯಾಗಿದೆ. ಅತ್ಯಂತ ಶಾಂತಿಯು ಶಾಂತ್ಯತೀತೆಯು. ಈ ಕಲೆಯು ಅಂಗನನ್ನು ಆನಂದಾನುಭವನಲ್ಲಿರಿಸಿ ಆನಂದ ಭಕ್ತಿಯಿಂದ ಯುಕ್ತನನ್ನು ಮಾಡಿ ಶರಣನೆನಿಸುತ್ತದೆ. ಪ್ರಸಾದಲಿಂಗವೆ ಶರಣನನ್ನು ತನ್ನಲ್ಲಿ ಎಡಬಿಡದೆ ಹೊಂದಿ ಸಮರಸಭಕ್ತಿಯಿಂದ ಯುಕ್ತನನ್ನಾಗಿಸುವದು. ಇದೇ ಮಹಾಲಿಂಗ ಮತ್ತು ಐಕ್ಯಸ್ಥಳವು. ಮಹಾಲಿಂಗದ ಶಾಂತ್ಯತೀತೋತ್ತರೆ ಯೆಂಬ ಕಲೆಯು ದ್ವೈತದ ವಿಲಯದಿಂದ ಅಂಗನೆಂಬ ಜೀವನನ್ನು ಮಹಾಲಿಂಗದಲ್ಲಿ ಮುಳುಗಿಸಿ ಸಮರಸಸ್ಥಿತಿಯನ್ನು ಅಥವಾ ಸಮರಸ ಭಕ್ತಿಯನ್ನು ಆ ಅಂಗನಿಗೆ ಸಂಗಳಿಸುವುದು. ಸಾಮರಸ್ಯವೆ ಮುಕ್ತಿಯು.

ಆದುದರಿಂದ ಒಂದೇಒಂದು ಸ್ಥಳವು ಅಂಗವೆಂತಲು ಲಿಂಗವೆಂತಲು ಎರಡುಭಾಗವಾಗಿ ಆ ಸ್ಥಳದಲ್ಲಿಯೆ ತಾದ್ಯಾತ್ಮ್ಯದಿಂದಿರುವ ಶಕ್ತಿಯು ಶಕ್ತಿ ಭಕ್ತಿಗಳೆಂಬೆರಡು ವಿಧವನ್ನು ಹೊಂದಿ ಪೂಜ್ಯಪೂಜಕವಾದ ಭಾವವನಾಂತ ವಿವರವು ಈ ವಾಕ್ಯದಲ್ಲಿ ಅಡಕವಾಗಿದೆ.

ಈ ಬಗೆಯಾಗಿ ಶ್ರೀಮದಲ್ಲಮನ ವಚನಗಳು ವೀರಶೈವ ಸಿದ್ಧಾಂತವನ್ನು ಗರ್ಭೀಕರಿಸಿದ ಸೂತ್ರಗಳೆ ಆಗಿವೆ. ಅವುಗಳಿಂದ ಪಂಡಿತರು ಶಾಸ್ತ್ರಸಾರವನ್ನೆ ತಿಳಿಯಲಹುದು. ಉತ್ತಮಾಧಿಕಾರಿಗಳಾದ ಭಕ್ತರು ಸದ್ಯೋಮುಕ್ತಿಯನ್ನೈದಲಹುದು ಇಂತಹ ವಚನಗಳನ್ನು ಪ್ರಭುವು ಎರಡು ಎಂಭತ್ತೇಳು ಕೋಟಿನ ಡಿದಿಸುವನು. ನಮ್ಮ ಭಾಗ್ಯವು ಇಷ್ಟು ಉಜ್ವಲವಿಲ್ಲದಿರುವ ನಮಗೆ ಅವೆಲ್ಲ ದೊರಕುವುದಿಲ್ಲ.

CC-0. Jangamwadi Math Collection. Digitized by eGangotri

ಪ್ರಭುದೇವರ ಸಂಪ್ರದಾಯವನ್ನು ಕಾಪಾಡುವವರೆಂದು ಅಲ್ಲಲ್ಲಿಗೆ ಪ್ರಭುವಿನ ಹೆಸರಿನಿಂದ ಶೋಭಿಸುತ್ತಿರುವ ಮಹಾತ್ಮರು ಈ ವಚನಗಳನ್ನು ಮನನಮಾಡಿ ತಾವೂ ಕೃತಾರ್ಥರಾಗಿ ಭಕ್ತರನ್ನುದ್ಧರಿಸಿ ಕೃತಾರ್ಥರನ್ನಾಗಿ ಸವೆ ವಚನಗಳಿಗೆ ವಿರೋಧವಾಗಿ ಅಷ್ಟಾವರಣಯುತರಲ್ಲಿ ಕುಲಮರ್ಯಾದೆಗಳನ್ನು ಮನ್ನಿಸುವರು.

ತಮಗೆ ನಿರಾಭಾರೋಪ ದೇಶವಾಗುವಾಗ ದೊರೆತ ಪ್ರಭುದೇವರ ವಚನಕ್ಕಿಂತಲು ಮತ್ತೊಂದರಲ್ಲಿ ಶ್ರದ್ಧೆಯನ್ನಿಡದೆ, ವಿಚಾರಪೂರ್ವಕವಾಗಿ ಆ ವಚನಗಳನ್ನು ತಿಳಿದ ಮಹಿಮರು ಮಾತ್ರ ಧರ್ಮವಗ್ಲಾನಿಯನ್ನು ಹೋಗಲಾಡಿಸಲು ಸಮರ್ಥರಿರುವರು.

## ತಾನೇ ಗುರುಲಿಂಗಜಂಗಮವಾದನು.

ಸರ್ವಾಗಮೋಪನಿಷತ್ತುಗಳಸಾರವನ್ನು ಬೀರುವ ಈ ವಚನವನ್ನು ನೋಡಿರಿ. "ಕಾಣುದುದ ನರಸುವರಲ್ಲದೆ ಕಂಡುದ ನರಸುವರೆ ಘನಕ್ಕೆ ಘನವಾದ ವಸ್ತು ತಾನೆ ಗುರುವಾದ ತಾನೆ ಲಿಂಗವಾದ ತಾನೆ ಜಂಗಮವಾದ ತಾನೆ ಮಂತ್ರವಾದ ತಾನೆ ತಂತ್ರವಾದ ತಾನೆ ಇಂತಿವನೊಳಕೊಂಡು ಎನ್ನ ಕರಸ್ಥಲಕ್ಕೆ ಬಂದ, ಇನ್ನು ನಿರ್ವಿಕಾರ ಗುಹೇಶ್ವರ". "ಬ್ರಹ್ಮತಂ ಪರಾದಾದ್ಯೋಽನ್ಯ ತ್ರಾತ್ಮನೋಽಬ್ರಹ್ಮವೇದ" ಎಂಬಶ್ರುತ್ಯರ್ಥವನ್ನೆ ಪ್ರಭುವು ಇಲ್ಲಿ ಹೇಳುವನು. ಆವನೊಬ್ಬನು ತನ್ನಿಂದ ಬೇರೆಯಾದೆಡೆಯಲ್ಲಿ ಬ್ರಹ್ಮವುಂಟೆಂದು ತಿಳಿವನೊ ಅವನನ್ನು ಬ್ರಹ್ಮವು ದೂರೀಕರಿಸುವುದು ಎಂದು ಈ ಶ್ರುತಿಯು ಸಾರುತ್ತದೆ. ಅಂದರೆ ಉಪಾಸಕನು ಬ್ರಹ್ಮವು ತನ್ನಿಂದನ್ಯವಾದುದಲ್ಲ ತನ್ನ ಆತ್ಮ ರೂಪವೆ ಎಂದು ತಿಳಿಯತಕ್ಕುದು. ಕೇವಲ ಭಾವಿಸತಕ್ಕುದೆಂತಲ್ಲ ಅನುಭವದಿಂದ ಸಾಕ್ಷಾತ್ಕರಿಸ ತಕ್ಕುದು. ಬ್ರಹ್ಮವು ಗುರುವಾಗಿ ಬೋಧಿಸುತ್ತಲು, ಲಿಂಗವಾಗಿ ಅಂಗನ ಇಂದ್ರಿಯಗಳನ್ನೆಲ್ಲ ವ್ಯಾಪಿಸುತ್ತಲು ಜಂಗಮವಾಗಿ ಆತನ ಅಹಂಕಾರ ಮಮಕಾರಗಳನ್ನು ಭೇದಿಸುತ್ತಲು, ಮಂತ್ರವಾಗಿ ವಾಗಿಂದ್ರಿಯವನ್ನು ಶುದ್ಧೀಕರಿಸಿ ವಾಗಿಂದ್ರಿಯದಿಂದ ಪಂಚವಾಯುವನ್ನೂ ಪಂಚವಾಯುವಿನಿಂದ ಸರ್ವೇಂ

CC-0. Jangamwadi Math Collection. Digitized by eGangotri

ದ್ರಿಯ ವೃತ್ತಿಗಳನ್ನೂ ಶುದ್ಧೀಕರಿಸಿ ಮಲಮಾಯೆಗಳಿಂದ ಮುಕ್ತನಾದ ಶಿವನನ್ನು ವ್ಯಕ್ತಗೊಳಿಸಿ ಆ ಶಿವನೆ ತಾನಾಗಿರುವುದನ್ನು ತೋರಿಸಿ ಮುಕ್ತಿಯಿನ್ನೀವುದು.

ಕರಸ್ಥಲಕ್ಕೆ ಬಂದ ಇಷ್ಟಲಿಂಗವೆ ಗುರುಜಂಗಮ ಮಂತ್ರ ರೂಪವು ಆಗಿರುವುದಲ್ಲದೆ ಬೇರೆಯಲ್ಲ. ಗುರುವು ಇಷ್ಟಲಿಂಗಕ್ಕೂ ಇಷ್ಟಲಿಂಗವು ತನಗೂ ಭಿನ್ನವಾದುದೆಂಬ ಭಾವವು ನಿರಯಕ್ಕೆ ಅಥವಾ ಸಂಸಾರಕ್ಕೆ ಮೂಲವು. ಇನ್ನು ಗುರುವೂಲಿಂಗವೂ ಅಭಿನ್ನವೆಂಬನುಭವವು ಹೇಗೆ?

ಲಿಂಗವು ಮಂತ್ರಮಯವು "ಮಂತ್ರೋಲಿಂಗ ಮಿತಿಪ್ರೋಕ್ತಃ" ಮಂತ್ರವುಲಿಂಗವೆಂದು ಹೇಳಲ್ಪಟ್ಟಿತು. ವಾತುಲಾಗಮ ಅನುಭವ ಸೂತ್ರಅಧಿಕರಣ "ನಮಃ ಪೀಠಮಿತಿ ಪ್ರೋಕ್ತಂ ಶಿಕಾರೋಮಧ್ಯಮಿರಿತಂ। ವಾಕಾರೋಗೋಮುಖಂ॥ ವೃತ್ತಂಯಕಾರೋಗೋಲಕಂಸಸ್ಮೃತಂ। ಓಂಕಾರೋಲಿಂಗಮಾಖ್ಯಾತಂ ಲಿಂಗಂ ಷಡ್ವರ್ಣಮೀರಿತಂ"॥ ನಮಃ " ಎಂಬುದೆ ಪೀಠವು 'ಶಿಕಾರನೆ ಮಧ್ಯವು. ವಾಕಾರವೆ ಗೋಮುಖವು 'ಯಕಾರವೆ ಗೋಲಕವು ಅಂದರೆ ಪೀಠದಲ್ಲಿರುವ ಪಿಂಡಿಕಾಧಾರವು. ಓಂಕಾರವೆ ಪಿಂಡಿಯು ಇಷ್ಟಲಿಂಗವು ಷಡಕ್ಷರ ರೂಪವು. ಮಂತ್ರವು ಗುರುವಿನ ಶಿವಾತ್ಮಾನುಸಂಧಾನವಚನವು ಅಂದರೆ ಶಿವಾತ್ಮಕನು ನೀನಾಗಿರುವೆ ಎಂಬ ಅರಿವನ್ನು ತನ್ನ ಬಳಿವಂದ ಶಿಷ್ಯನಿಗೆ ಉಸುರಿದ ನುಡಿಯು. ಓಂನಮಃಶಿವಾಯ ಎಂಬೀ ಮಂತ್ರವು ಶಿವಾತ್ಮತೆಯನ್ನು ವ್ಯಕ್ತೀಕರಿಸುವುದಾಗಿದೆ. ಶಿವಾತ್ಮ ತಾನು ಭವರೂಪವೆ ಆಗಿದೆ " ನಮಃ ಶಬ್ದಉಮಾ ಸಾಕ್ಷಾಚ್ಛಿವಶಬ್ದಃ ಶಿವಃ ಸ್ವಯಂ। ಆಯಶಬ್ದಸ್ತಯೋರ್ಯೋಗ॥ ಶಿವೋಲಿಂಗಮುವೈವಾಂಗಮನಯಾಸಹಿತ ಸ್ತ್ವಯಂ। ಸೋವಃ ಸಂಬಂಧ ಇತ್ಯೇವಂ ಪದ ತ್ರಯಮುಪಾಸ್ಮಹೇ" . ।ವಿಶೇಷಾರ್ಥ ಪ್ರಕಾಶಿಕಾ। ನಮಃ ಶಬ್ದವು ಉಮೆಯ ವಾಚಕವು. ಉಮೆಯೆ ಅಂಗನು. ಶಿವಶಬ್ದವು ಶಿವವಾಚಕವು ಆಯಶಬ್ದವು ಸಂಯೋಗವಾಚಕವು ಅಂಗಲಿಂಗಗಳ ಸಾಮರಸ್ಯವೆ ಓನಮಃ ಶಿವಾಯ ಎಂಬುದು

CC-0. Jangamwadi Math Collection. Digitized by eGangotri

ಈ ವಿಚಾರದಿಂದ ಮಂತ್ರವು ಶಿವಾತ್ಮತಾನುಭವಮಯವು ಈ ಅನುಭವವೇ ಲಿಂಗವು ಗುರುವು ಶಿವಸ್ವರೂಪತೆಯನ್ನು ಅನುಭವಸಿದರಿಂದಲೆ ಗುರುವಾಗಿರುವನು. ಆದರಿಂದ ಗುರುತ್ವಕ್ಕೆ ಶಿವನೆ ತಾನೆಂಬನುಭವವೆ ಮೂಲವು. ಆ ಅನುಭವವನ್ನು ಮಂತ್ರದಿಂದ ಶಿಷ್ಯನೆಕಿವಿಯಲ್ಲಿ ಮೆಲ್ಲಗೆ ಹೇಳಿ ಅದರ ಮೂರ್ತರೂಪವಾದ ಲಿಂಗವನ್ನು ಶಿಷ್ಯನ ಹಸ್ತತಲದಲ್ಲಿಡುವುದರಿಂದ ಗುರುವೆ ಲಿಂಗವು.

ತಾನೇ ಆದ ಆಲಿಂಗವು ನೀನೆ ಎಂದು ಶಿಷ್ಯನನ್ನು ಗುರುವುಬೋಧಿಸುವುದರಿಂದ ಗುರು ಶಿಷ್ಯರು ಲಿಂಗರೂಪವು ಅಂದ ಬಳಿಕ ಗುರುಶಿಷ್ಯಲಿಂಗವೆಂಬವು ಏಕರೂಪವು. ಈ ವಿಷಯುವನ್ನುಶ್ರೀಮದಲ್ಲಮನು ಎಷ್ಟು ಹೃದಯಂಗಮವಾಗಿ ಸ್ಪಷ್ಟೀಕರಿಸುವನುನೋಡು “ ಒಂದೆಂಬೆನೆ ಎರಡಾಗಿದೆ. ಎರಡೆಂಬೆನೆ ಒಂದಾಗಿದೆ. ಒಂದೆರಡೆಂಬ ಸಂದೇಹವಿದೇನೊ ? ಅಗಲಲಿಲ್ಲದ ಕೂಟಕ್ಕೆ ಬಿಚ್ಚಿ ಬೇರಾಗದ ಉಪದೇಶಕ್ಕೆ, ಗುರುಶಿಷ್ಯವೆಂಬ ಭಾವಕ್ಕೆ ಭೇದ ಉಂಟೆ ಗುಹೇಶ್ವರ?” ಗುರುಶಿಷ್ಯರೆಂಬರು ಯಥಾರ್ಥವಿಚಾರದಲ್ಲಿ ಒಂದಾಗಿರುವರು. ಈ ವಿಚಾರದಿಂದ ಅವರೀರ್ವರು ಬಂದೆಯೆನ್ನುವೆನೆ? ಗುರುಶಿಷ್ಯರೀರ್ವರು ಭಿನ್ನವಾಗಿ ತೋರುವರು. ಈ ತೋರಿಕೆಯಿಂದ ಇವರು ಒಬ್ಬರಿಗೊಬ್ಬರು ಭಿನ್ನನೆಂಬೆನೆ? ಯಥಾರ್ಥವಾಗಿ ಒಂದೆಯಾಗಿಹರು. ಹೀಗೆ ಸಂದೆಹಗೊಳ್ಳುವದು ಸಹಜವಲ್ಲ. ಗುರುಶಿಷ್ಯರೆಂದು ಬೇರೆ ಕಂಡರು ಏಕತ್ವಕ್ಕೆ ಹಾನಿಯುಲ್ಲ. ಇದರ ವಿವರ:—

ಗುರುವಿನ ಶಿವಾತ್ಮಾನುಭವವೆ ಶಿಷ್ಯನ ಶಿವತಾನುಭವರೂಪಜ್ಞಾನಹೇತುವಾಗಿದೆ. ಶಿಷ್ಯನು ಕಾಷ್ಠದಂತೆಯೂ ಗುರುವು ಅಗ್ನಿಯಂತೆಯೂ ಇರುವನು. ಕಾಷ್ಠವು ಅಗ್ನಿಯೋಗದಿಂದ ಅಗ್ನಿಯೆ ಆಗುತ್ತದೆ. ಶಿಷ್ಯನಲ್ಲಿ ಅಡಗಿದ್ದ ಜ್ಞಾನವು ಗುರುವಿನ ಜ್ಞಾನದ ಮಹಿಮೆಯಿಂದ ಪುಟವಾಗಿ ತನ್ನನ್ನು ಮುಸುಕಿದ ಅಜ್ಞಾನದ ಆವರಣವನ್ನು ದಹಿಸಿ ಪ್ರಕಟವಾಗುತ್ತದೆ ಹಾಗೆ ಪ್ರಕಟವಾಗುತ್ತಲು ಅವರ ಏಕರೂಪವು ಸ್ಪಷ್ಟವಾಗುತ್ತದೆ.

CC-0. Jangamwadi Math Collection. Digitized by eGangotri

ಜ್ಞಾನವು ಪ್ರಕಟವಾದ ಶಿಷ್ಯನು ಗುರುವಿನಿಂದ ಭಿನ್ನನಾದರೆ,-ಗುರು ಸ್ವರೂಪನಾಗಿರದಿದ್ದರೆ-ಗುರುವನ್ನು ಆಶ್ರಯಿಸುವದೆ ಅನರ್ಥಕವಾಗಿಹುದು. ಇನ್ನೊಂದು ವಚನದಲ್ಲಿ ಅಲ್ಲಮನು ಏನೆನ್ನುವನು ನೋಡಿರಿ. "ನೀನೆಗೆ ಗುರುವಪ್ಪಡೆ ನಾನಿನಗೆ ಶಿಷ್ಯನಪ್ಪಡೆ ಎನ್ನಕಾಯದ ಕರ್ಮವಕಳೆದು ಎನ್ನ ಕರಣಾದಿ ಗುಣಂಗಳಕಳೆದು ನೀನೆನ್ನಕಾಯದಲ್ಲಡಗಿ ನೀನೆನ್ನಪ್ರಸಾದದಲ್ಲ ಡಗಿ ನೀನೆನ್ನಭಾವದಲ್ಲಡಗಿ ನೀನೆನ್ನ ಕರಸ್ಥಲಕ್ಕೆಬಂದು ಕಾರುಣ್ಯವ ಮಾ ಡುಗೊಹೇಶ್ವರಾ"—ಗುರುಶಿಷ್ಯಭಾವಕ್ಕೆ ಅವರೀರ್ವರ ಭೇದವು ಅಳಿವುದೆ ಪ್ರಯೋಜನವು.

ಗುರುಶಿಷ್ಯರ ಏಕತ್ವದನುಭವವೆ ಜಂಗಮತತ್ತ್ವವು. ಕರಗತ ಲಿಂಗವೆ ಸರ್ವೇಂದ್ರಿಯಂಗಳನ್ನು ವ್ಯಾಪಿಸಿ ಜಂಗಮುಮೆನಿಸಿತು. ಅದು ಮಂತ್ರಮಯವಾಗುದನ್ನು ಮೇಲೆ ಹೇಳಿದ್ದೇನೆ. ಅದರಿಂದ ತಾನೆ ಗುರು ಮಂತ್ರ ಲಿಂಗ ಜಂಗಮುವಾದನು.

ಅಲ್ಲಮನು ಬೋಧಿಸಿದ ಈ ಶಕ್ತಿವಿಶಿಷ್ಟ ಶಿವಾದ್ವೈತವು ಸಕಲನಿಗ ಮಾಗಮಸಮ್ಮತವಾದುದು. ಅದನ್ನೆ ಪ್ರಭುವು ಕನ್ನಡನುಡಿಯಲ್ಲಿ ಹೇಳಿ ರುವನು.

## ಸಂಸ್ಕೃತದಲ್ಲೇಕೆ ಹೇಳಲಿಲ್ಲ?

ಇಂತು ಅತ್ಯುಜ್ಜ್ವಲವಾದ ಸಿದ್ಧಾಂತವನ್ನು ಪ್ರಭುವು ಹೇಳಿರುವುದ ರಿಂದ ಅವನು ಈ ವೀರಶೈವಮತಷಟ್ಸ್ಥಲಸ್ಥಾಪನಾಚಾರ್ಯನಹುದು. ಅವನ ವಚನ ಸರಣಿಯನ್ನು ನೋಡಿದರೆ ಅತಿ ಗಂಭೀರವಾಗಿಯೂ ಸಾರ ವತ್ತಾಗಿಯೂ ಇರುವುದು. ಮೇಲೆ ಆ ವಚನವು ಎಷ್ಟು ಅರ್ಥಗಳನ್ನು ಗರ್ಭೀಕರಿಸಿರುವುದೆಂಬುದನ್ನು ಯಥಾಶಕ್ತಿ ತೋರಿಸಿರುವೆನು. ಸಂಸ್ಕೃತ ವೆಂದರೆ ಒಂದಾನೊಂದು ವಿಶಿಷ್ಟಭಾಷೆಯಹೆಸರಲ್ಲ. ಲಕ್ಷಣದಿಂದ ಕೂಡಿದ ಸಾಧುಶಬ್ದವೆ ಸಂಸ್ಕೃತವು. ಅಮರಟೀಕೆಯಲ್ಲಿ ಭರತನು, "ಪಾಣಿನ್ಯಾದಿ ವ್ಯಾಕರಣಸೂತ್ರೇಣ ಲಕ್ಷಣೋಪೇತಃ ಸಾಧುಶಬ್ದಃ"ಎಂದು ಸಂಸ್ಕೃತ ಶಬ್ದ ನಿರ್ವಚನವ ಮಾಡಿರುವನು. ಕನ್ನಡ ಭಾಷೆಗಾದರು ಲಕ್ಷಣ ಗ್ರಂಥಗ ಳುಂಟು. "ಗುಣಮುಮರೆ ಶಬ್ದಮಣಿದ। ರ್ಪಣನಾಮವನಿಟ್ಟು ನೆರೆಯೆ ಕರ್ಣಾಟಕ ಲ। ಕ್ಷಣಶಬ್ದ ಶಾಸ್ತ್ರಮುಂಲಾ। ಕ್ಷಣಿಕರ್ಪೇಳೆಂದು ಬೆಸಸೆ ಬಗೆಯುಗೆಪೇಳ್ದಿಂ॥ ಕರ್ಣಾಟಕ ಭಾಷೆಗೆ ಶಬ್ದಾನುಶಾಸನ ಶಬ್ದಮಣಿದ ರ್ಪಣ, ಮೊದಲಾದ ಲಕ್ಷಣಗ್ರಂಥಗಳಿರುವುದರಿಂದ ಇದಾದರು ಸಂಸ್ಕೃ ತವು.

CC-0. Jangamwadi Math Collection. Digitized by eGangotri

ಈ ಅರ್ಥದಲ್ಲಿ ಶಬ್ದಾನುಶಾಸನ ಕರ್ತೃವಾದ ಭಟ್ಟಾಕಲಂಕನು "ನಮಃ ಶ್ರೀವರ್ಧಮಾನಾಯ ವಿಶ್ವವಿದ್ಯಾವಭಾಸಿನೆ | ಸರ್ವಭಾಷಾಮಯೀಭಾಷಾಪ್ರವೃತ್ತಾಯ ಸ್ಯಮುಖಾಂಬುಜಾತ್" ॥ ಎಂಬ ಮಂಗಲ ಶ್ಲೋಕದಿಂದ ಭಗವದ್ವಾಣಿಯು ಕರ್ಣಾಟಕ ಶಬ್ದವೃಂದಕ್ಕೆ ಮೂಲವೆಂದು ಉದ್ಘೋಷಿಸುವನು. ಈ ರೀತಿಯಲ್ಲಿ ಕರ್ಣಾಟಕ ಭಾಷೆಯು ಭಗವದ್ವಾಣೀಮೂಲವೆಂದು ಸೂಚಿಸಿ ಆ ಶಬ್ದಗಳು ಅನುಶಾಸನಕ್ಕೆ ತಕ್ಕವು ಆದರೆ ವ್ಯಾಕರಣಶಾಸ್ತ್ರದಿಂದ ವ್ಯುತ್ಪತ್ತಿ ಪೂರ್ವಕವಾಗಿ ಸಾಧ್ವಸಾಧು ವಿವೇಚನ ಪೂರ್ವಕವಾಗಿ ಪ್ರಯೋಗಾರ್ಹವಾಗಿರುವುವೆಂದ, "ಅಥಃಶಬ್ದಾನುಶಾಸನ ಮಾರಭ್ಯತೇ" ಕೇಷಾಂಶಬ್ದಾನಾಂ" "ಕರ್ಣಾಟಕಾನಾಂ" ಎಂಬ ಮೂರು ಸೂತ್ರಗಳಿಂದ ಹೇಳುತ್ತಾನೆ.

ಅದಿರಲಿ, ವಾಡಿಕೆಯಾಗಿ ಸಂಸ್ಕೃತವೆನಿಸಿಕೊಂಬ ಗೀರ್ವಾಣಭಾಷೆಯಲ್ಲೇಕೆ ಅಲ್ಲಮನು ತನ್ನ ವಚನಗಳನ್ನು ಹೇಳಲಿಲ್ಲ? ಎಂದು ಕೆಲವರಾಕ್ಷೇಪಿಸಿರುವರು. ಸಂಸ್ಕೃತಭಾಷೆಯಲ್ಲಿ ಹೇಳಿದ ವೇದಾಗಮೋಪನಿಷತ್ತುಗಳ ಯಥಾರ್ಥವನ್ನು ಅರಿಯದೆ ಕಂಡವರು ಕಂಡಂತೆ ಅರ್ಥಮಾಡಿದರಿಂದ ಬಹಳ ಆಯಾಸದಿಂದ ತತ್ತ್ವವು ತಿಳಿಯಬಹುದಾಗಿದೆ. ಅಲ್ಪಕಾಲದಲ್ಲಿಯೆ ಅನೇಕ ಹೋರಿಗಳನ್ನು ಮಾಡುತ್ತಿರುವ ಭಕ್ತಿಪರಿಪ್ಲುತಮಾನಸರಾದ ಮುಮುಕ್ಷುಗಳಿಗೆ ಸುಲಭವಾಗಿ ಧರ್ಮರಹಸ್ಯದ ಬೋಧವಾಗಬೇಕೆಂಬ ಬುದ್ಧಿಯಿಂದ ಅಲ್ಲಮನು ವಚನಗಳನ್ನು ಕನ್ನಡದಿಂದಲೆ ಹೇಳಿದನು. ಕನ್ನಡದಲ್ಲಿ ಹೇಳಿದುದರಿಂದ ಧರ್ಮತತ್ತ್ವಗಳ ಪರಿಚಯವು ಬಹುಜನಕಾಯ್ತು. ಅವರೆಲ್ಲರು ಕೃತಾರ್ಥರಾದರು. ಅತ್ಯುತ್ತಮವಾದ ಕನ್ನಡತಾಯ್ನುಡಿಯಿಂದ ಧರ್ಮರಹಸ್ಯವನ್ನು ಬೋಧಿಸುವ ವಚನಗಳನ್ನು ಬಹಳ ಮಂದಿ ಶರಣರು ಬರೆಯುವ ಸುಯೋಗವು ಪ್ರಭುವು ಕನ್ನಡದಲ್ಲಿ ಬೋಧಿಸದಿದ್ದರೆ ಬರುತ್ತಿರಲಿಲ್ಲ.

ಧರ್ಮಗ್ರಂಥಗಳು ಪೂರ್ವದಲ್ಲಿ ಸಂಸ್ಕೃತದಲ್ಲಿ ಬರೆಯಲ್ಪಟ್ಟುದರಿಂದ ಸಾಮಾನ್ಯ ಜನತೆಗೆ ಅವುಗಳ ಪರಿಚಯವಾಗಲಿಲ್ಲ. ಒಂದು ವರ್ಗದವರೆ ತಾವು ಧರ್ಮಗುರುಗಳೆಂದೂ ತಮ್ಮಿಂದಲ್ಲದೆ ಧರ್ಮವು ತಿಳಿಯದೆಂದೂ ತಾವೋರ್ವರೆ ಧರ್ಮದ ಸರ್ವಸಂಸ್ಕೃತಿಗಳಿಗೆ ಅರ್ಹರು. ಉಳಿದವರಲ್ಲಿ ಕೆಲವರು ತಮಗಿಂತಕಡಿಮೆ ಸಂಸ್ಕಾರಗಳನ್ನು ಹೊಂದಲಿಕ್ಕೆ ತಕ್ಕವರೆಂತಲು ಇನ್ನುಳಿದವರು ಯಾವಸಂಸ್ಕೃತಿಯನ್ನು ಹೊಂದಲೂ ಅನರ್ಹರೆಂದೂ ಧರ್ಮವನ್ನು ಒಂದುವರ್ಗದ ಸೊತ್ತನ್ನಾಗಿ ಕಲ್ಪಿಸಿಕೊಂಡರು. ಇವರು ದಯ

CC-0. Jangamwadi Math Collection. Digitized by eGangotri

ಬಟ್ಟುಕೊಟ್ಟಷ್ಟು ಧರ್ಮದಿಂದಲೆ ಜೀರಿಯುವರು ತೃಪ್ತರಾಗಬೇಕು. ಪರಮಾತ್ಮನು ತನ್ನಸೃಷ್ಟಿಯಲ್ಲಿ ನದಿಗಳನ್ನು ಸರ್ವಪ್ರಾಣಿಗಳ ತೃಷಾನಿವೃತ್ತಿಗಾಗಿಯೂ ಇತರಸುಖಕ್ಕಾಗಿಯೂ ನಿರ್ಮಾಣಮಾಡಿರುವನು. ಆದರೆ ಕೆಲವರು ಪುಣ್ಯಾತ್ಮರು ಆ ನದಿಗಳಲ್ಲಿ ಅನುಕೂಲತೆಯ ಸ್ಥಳಗಳನ್ನು ಹಿಡಿದುಕೊಂಡು ಜೀರಿಯುವರನ್ನು ಅಲ್ಲಿಗೆ ಬರಗೊಡಿಸದಂತೆ ಧರ್ಮದ ಸುಖಶಾಂತಿಕರವಾದ ಜ್ಞಾನಪ್ರವಾಹವನ್ನು ಈ ಸಂಸ್ಕೃತಪಂಡಿತರು ಆಕ್ರಮಿಸಿ ಅನ್ಯರನ್ನು ಬರಗೊಡಲಿಲ್ಲ.

ಜ್ಞಾನದ ನಿರ್ವಿಘ್ನಪ್ರವಾಹವನ್ನು ತಡೆಯುವ ಪಾತಕವು ಬಲುದೊಡ್ಡದು. ಅದು ತಡೆದವನನ್ನು ಅಧಃಪಾತಕ್ಕೆ ಈಡುಮಾಡದೆ ಬಿಡದು. ತಡೆಯುವವರ್ಗವು ಬರಬರುತ್ತ ಜ್ಞಾನಶೂನ್ಯವಾಗಿ ತಾನೂ ಉಳಿದವರ್ಗದವರೊಡನೆ ರಸಾತಲಕ್ಕಿಳಿವುದು. ಪ್ರಭುವು ಇದನ್ನೆಲ್ಲರಿತು ತಾನು ಲೋಕರಕ್ಷಣಕ್ಕಾಗಿ ಬೋಧಿಸುವ ತತ್ತ್ವಗಳು ಸ್ವಾರ್ಥಪರರಕೈಯಲ್ಲಿ ಬಿದ್ದು ಧರ್ಮವು ಹಾಳಾಗಬಾರದೆಂದು ಕನ್ನಡ ವಚನಗಳಿಂದಲೆ ಉಚ್ಚಶಿವತತ್ತ್ವವನ್ನು ಬೋಧಿಸಿದನು. ಸಂಸ್ಕೃತದಲ್ಲಿ ಬರೆದಿದ್ದರೆ ಅಥವಾ ಹೇಳಿದ್ದರೆ ಅತ್ಯಲ್ಪಜನಕ್ಕೆ ಮಾತ್ರತಿಳಿಯುತ್ತಿತ್ತು ಕನ್ನಡದಲ್ಲಿ ಬೆಸಸಿದರಿಂದ ಇಡಿಯ ಕರ್ಣಾಟಕವು ಧರ್ಮಭೂಮಿಯಾಯಿತು.

ಶಬ್ದಾನುಶಾಸನಟೀಕಾಕಾರನು ಜೈನಗ್ರಂಥಗಳನ್ನು ಕನ್ನಡದಲ್ಲಿ ಬರೆದ ವಿಷಯದಲ್ಲಿ ಆಡಿದ ಸಂದರ್ಭವು ವೀರಶೈವ ಗ್ರಂಥಗಳಿಗೂ ಅನ್ವಯಿಸುತ್ತದೆ. ಅದೇನೆಂದರೆ " ಈಭಾಷೆಯು ಶಾಸ್ತ್ರಕ್ಕುಪಯುಕ್ತವಾದುದೂ ಆದುದರಿಂದಲೆ ಮಹಾಜನಪರಿಗ್ರಾಹ್ಯವಾದುದೂ ಎಂದು ತಿಳಿವುದು.

## ಬಾದರಾಯಣ ಸೂತ್ರಗಳಿಗೇಕೆ ಭಾಷ್ಯವನ್ನು ಬರೆಯಲಿಲ್ಲ?

ಶ್ರೀಮದಲ್ಲಮನ ವಚನಗಳ ಲಲಿತತತ್ತ್ವವನ್ನೂ ಸಾರವತ್ತೆಯನ್ನೂ ತೋರಿಸಿದೆನು. ಆದುದರಿಂದ ಆ ವಚನಗಳು " ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಂ । ಅಸ್ತೋಭಮನವದ್ಯಂಚ ಸೂತ್ರಂ ಸೂತ್ರವಿದೋವಿದುಃ" ಎಂಬೀಲಕ್ಷಣಕ್ಕನುಸರಿಸಿ ಸಿದ್ಧಾಂತ ಸೂತ್ರಗಳಾಗಿವೆ. ಲೋಕದಲ್ಲಿ ಬಾದರಾಯಣನ ಸೂತ್ರಗಳಿಗೆ ಭಾಷ್ಯವನ್ನು ಬರೆಯಲಿಲ್ಲ ಏಕೆ ಎಂದು ಮುಂದಕಂ ಕೆಯು ಕೆಲವರ ಮುಂದೆ ನಿಲ್ಲುತ್ತದೆ. ಅವರು ಶಿವರಹಸ್ಯ ಒಂದನೆಯ ಅಂಶದ ಎರಡನೆಯಧ್ಯಾಯದ ಮೂನೆಯ ಶ್ಲೋಕದಲ್ಲಿ ಜೈಗೀಷವ್ಯನು ಹರಿಗೆ ಅಂದುದನ್ನೂ ಆರನೆಯಧ್ಯಾಯದಲ್ಲಿ ಶಿವನು ಉಮೆಗೆ ಅಂದುದನ್ನೂ ವಿಚಾರಿಸಲಿ.

CC-0. Jangamwadi Math Collection. Digitized by eGangotri

"ಕೈವರ್ತಕನ್ಯಾಕಾನೀನದ್ವಿಜದೈತ್ಯನೃಪಾರ್ಭಕಾಃ । ತವಾವತಾರ ಮಾಹಾತ್ಮ್ಯ ವೇತ್ತಾರೋನವಯಂಹರೇ। ಹರಪಾದಾಂಬುಜ ಧ್ಯಾನನಿರ್ಧೂತತಮ ಸೋನವಯಮ್" ಎಲೈ ಹರಿಯೆ, ನಿನ್ನ ಅವತಾರಗಳ ಮಹಿಮೆಯನ್ನು ಮೀನಬಲೆಗಾರ ಕನ್ನೆಗೆ ಕನ್ಯಾಸ್ಥಿತಿಯಲ್ಲಿ ಜನಿಸಿದ ವ್ಯಾಸನೂ, ಹಿರಣ್ಯಕಶಿಪುದೈತ್ಯನ ಮಗನಾದ ಪ್ರಹ್ಲಾದನೂ, ತಿಳಿವರು. ನಾವು ಅದನ್ನರಿತಿಲ್ಲೆವು. ಏಕೆಂದರೆ ಶಿವಪಾದಕಮಲಗಳನ್ನು ಧ್ಯಾನಿಸುವುದರಿಂದ ನಂಮ ಮನದ ಕಲ್ಮಶವು ತೊಳೆದು ಹೋಗಿದೆ.

"ಅನ್ಯೇಮೀ ಮುನಯೋಗೃಹಾಶ್ರಮರತಾಃ ಶ್ರಾಂತಾಃ ಪರಂಸಂಸೃತೇಃ। ನಾನಾದೈವತ ಪೂಜನೇನ ಕುಧಿಯೋಜಾನಂತಿನೋಮಾಂಶಿವೇ॥ ಕಾನೀನಸ್ತ್ವಯ ಮಪ್ಯುಮೇವಿಧಿವ ಶಾತ್ಸಂಪ್ರಾಪ್ಯಮೇಕಾಶಿಕಾಂ । ಮತ್ಸಾನ್ನಿಧ್ಯಗತೋರ್ಧ್ವಬಾಹುರಸಕೃದ್ವ್ಯಾಚಷ್ಟ ದೈವಂಹರಿಂ ॥ ತಸ್ಮಾನ್ನಾರ್ಹತಿವಸ್ತ್ರ ಮಪ್ಯತಿತರಾಂಶ್ರೋತುಂ ಮದೀಯಂರಹಃ। ಪುಣ್ಯಂಮುಕ್ತಿ ರಹಸ್ಯಮೇತದನಘಂ" ಎಲೌ ಶಿವೆಯೆ ಈ ಬೇರೆ ಮುನಿಗಳು ಗೃಹಾಶ್ರಮಿಗಳಾಗಿ ನಾನಾದೇವತೆಗಳನ್ನು ಪೂಜಿಸಿ ಸಂಸಾರದಲ್ಲಿ ಶ್ರಾಂತರಾಗಿಹರು ಈ ಹೆಡ್ಡರು ಅನ್ಯ ದೇವತಾನಿರತರಾಗಿ ನನ್ನನ್ನು ತಿಳಿಯರು- ಕೈವರ್ತಕನ್ಯಾಸುತನಾದರು (ವ್ಯಾಸನಾದರು) ದೈವವಶದಿಂದ ನನ್ನ ಕಾಶಿಯನುಸಾರಿ ಅಲ್ಲಿ ನನ್ನ ಸಾನ್ನಿಧ್ಯದಲ್ಲಿ ಹರಿಯೆ ದೈವವೆಂದು ನುಡಿದನು. ಆದುದರಿಂದ ಆತನು ಪುಣ್ಯಕರವಾದ ಮುಕ್ತಿಯ ರಹಸ್ಯಪರವಾದ ಈ ಶಿವರಹಸ್ಯವನ್ನು ಕೇಳಲಿಕ್ಕೆ ಅಧಿಕಾರಿಯಾಗಲಾರನು. ಹೇಳಲಿಕ್ಕೆ ಅಧಿಕಾರಿಯಾಗುವುದಂತು ದೂರವೆ.

ಈ ಪ್ರಮಾಣಗಳಿಂದ ಬಾದರಾಯಣನು ಶಿವಪಾರಮ್ಯವನ್ನು ಅಷ್ಟೊಂದು ಸ್ಪಷ್ಟವಾಗಿಯೂ ಅನ್ಯದೇವತಾನಿರಾಸ ಪೂರ್ವಕವಾಗಿಯೂ ತಿಳಿದವನಾಗಿರಲಿಲ್ಲ. ಅಂತಹ ಬಾದರಾಯಣ ಸೂತ್ರಗಳಿಗೆ ಜಗ್ಗಿ ಅರ್ಥಮಾಡುವುದು ಶ್ರೀಮದಲ್ಲಮನಂತಹ ಶಿವಯೋಗಿಗೆ ಯೋಗ್ಯವಾಗಿರಲಿಲ್ಲ. ವೇದವ್ಯಾಸನ ಸಿದ್ಧಾಂತವು ವೀರಶೈವಸಿದ್ಧಾಂತಕ್ಕೆ ಪೂರ್ವಪಕ್ಷವಾದುದರಿಂದಲೆ ಅಸಿದ್ಧಾಂತ ಖಂಡನಸೂಚಕವೆಂದು ಪ್ರಭುಸಾಂಪ್ರದಾಯಕವಾಗಿ ವೀರಶೈವಗುರುಗಳು ವ್ಯಾಸಹಸ್ತವನ್ನು ಬಿರುದಿನಲ್ಲಿ ಮೆರೆಯಿಸುವರು.

## ಕ್ರಿಯಾಸಾರ ನೀಲಕಂಠಾಚಾರ್ಯರು.

ಇಲ್ಲಿಯೊಂದು ಸಂಶಯವು ತಲೆದೋರಬಹುದು. ಕ್ರಿಯಾಸಾರಕರ್ತೃವಾದ ನೀಲಕಂಠಾಚಾರ್ಯರು ಶೈವಾನಾಗಮಚೋದಿತಾನ್ ಶ್ರುತಿವಚೋ

CC-0. Jangamwadi Math Collection. Digitized by eGangotri

ನೀದ್ಯಾನ್ಪ್ರಕಂತೋವದನ್ । ವ್ಯಾಸೀಯಾಖಿಲ ಸೂತ್ರ ಬೋಧಿತಮತಪ್ರತ್ಯರ್ಥಿತಾದರ್ಶಿನಃ । ವೇದೋದೀರಿತಕರ್ಮಮಾರ್ಗಚರಿತಾ ಮೇತೇಷು ವೈಮುಖ್ಯವಪ್ಯನ್ಯೇಷಾಮಧಿಕಾರಿತಾಂ ಶ್ರುತಿಮತಾಚಾರಚ್ಯುತಾ ಚಾರಿಣಾಂ। ಶೈವೇಽಸ್ಮಿನ್ ಶ್ರುತಿಮೂಲತ್ವಂ ವ್ಯಾಸಸೂತ್ರಾನುಕೂಲತಾಂ । ವೈದಿಕಾಚರಣೀಯತ್ವಂ ತಾನ್ನಿರಸ್ಯ ಪ್ರದರ್ಶಯೇ " ಆಗಮುಗಳಲ್ಲಿ ಹೇಳಿದ ಶಿವಸಂಬಂಧವಾದ ಆಚಾರಗಳು ವ್ಯಾಸಸೂತ್ರಗಳಲ್ಲಿ ಬೋಧಿಸಿದ ಮತಗಳಿಗೆ ವಿರೋಧವಾದುವುಗಳೆಂದು ಕೆಲವರಾಗಿ ವೇದದಲ್ಲಿ ಹೇಳಿದ ಆಚಾರಗಳಲ್ಲಿ ಚರಿಸುವರು. ಈ ಆಚಾರಗಳಿಂದ ವಿಮುಖರಾಗಬೇಕೆಂತಲು ಶ್ರುತಿಮತದ ಆಚಾರಗಳಿಂದ ಭ್ರಷ್ಟರಾದವರು ಇದಕ್ಕೆ ಅಧಿಕಾರಿಗಳೆಂತಲು ಹೇಳುವರು. ಈ ಶೈವವು ಶ್ರುತಿಮೂಲವಾದುದೆಂದೂ, ವ್ಯಾಸಸೂತ್ರಾನುಕೂಲವಾದುದೆಂದೂ, ವೈದಿಕರಿಂದ ಆಚರಿಸಲಿಕ್ಕೆ ತಕ್ಕುದೆಂದೂ ಅವರನ್ನು ನಿರಸನಂಮಾಡಿ ತೋರಿಸುವೆನು. ಎಂದು ನೀಲಕಂಠಾಚಾರ್ಯರು ಸಾರುವಲ್ಲಿ ಬಾದರಾಯಣ ಸೂತ್ರಗಳು ಈ ವೀರಶೈವ ಧರ್ಮದ ರಹಸ್ಯವನ್ನು ಮುಟ್ಟಲಾರವೆಂದು ಹೇಳುವುದು ಅಸಮಂಜಸವು.

" ಅಥಾತೋಬ್ರಹ್ಮಜಿಜ್ಞಾಸಾ " ಎಂಬ ಸೂತ್ರವಿಚಾರದಲ್ಲಿ ಅತ್ರಾಯಮವಧೇಯೋರ್ಥಃ । ಬ್ರಹ್ಮಜಿಜ್ಞಾಸಿತಂಲಿಂಗಂಶಿವತತ್ತ್ವಂ ಶ್ರುತೀರಿತಂ ॥ ಎಂದೂ ತತ್ಪೂರ್ವದಲ್ಲಿ " ನಾಯಮಾತ್ಮೇತಿವಾಕ್ಯೇನ ಶಿವಸ್ಯವರಣಂತನೋಃ॥ ವರಣಂನಾಮ ತದ್ರೂಪಧಾರಣಂ ವಿಧಿಮಾರ್ಗತಃ " ಮುಮುಕ್ಷುವು ವಿಚಾರಿಸತಕ್ಕ ಬ್ರಹ್ಮಶಬ್ದವಾಚ್ಯ ಪದಾರ್ಥವು ಶಿವನೆ ಎಂತಲೂ, ಮತ್ತು ಶಿವಲಿಂಗಧಾರಣವು ಜ್ಞಾನಕ್ಕೆ ಅವಶ್ಯಕವೆಂತಲೂ ಸಿದ್ಧಪಡಿಸುವನು. ಮತ್ತು ಜನ್ಮಾದ್ಯಸ್ಯಯತಃ " ಎಂಬ ಸೂತ್ರದ ಅರ್ಥ ವಿಚಾರದಲ್ಲಿ " ಪಿಂಡಾದಿಜ್ಞಾನಶೂನ್ಯಾಂತ ಸ್ಥಲಸ್ಯೈಕಶತಸ್ಯತು ಯತಃ ಸಕಾಶಾದಿತ್ಯೇ ತದ್ಬ್ರಹ್ಮಲಕ್ಷಣಮುಚ್ಯತೇ ॥ ಪಿಂಡಾದಿಜ್ಞಾನಶೂನ್ಯಾಂತವಾದ ಏಕೋತ್ತರಶತಸ್ಥಲದಲ್ಲಿ ಅಡಕವಾದ ಸರ್ವತತ್ತ್ವಗಳು ಎಲ್ಲಿ ಸ್ಥಿತಿಲಯವನ್ನು ಹೊಂದುವುವೋ ಅದು ಬ್ರಹ್ಮವೆಂದು ಈ ಸೂತ್ರಕ್ಕೆ 'ಯತೋವಾ ಇಮಾನಿ ಭೂತಾನಿಜಾಯಂತೇ " ಇತ್ಯಾದಿ ವಾಕ್ಯವೃಂದವು ವಿಷಯವೆಂದು ಹೇಳಿ " ಯತೋವೇತ್ಯಾದಿ ವಿಷಯವಾಕ್ಯಾರ್ಥಾನುಗುಣೇನಹಿ । ವಿಸ್ತರ್ತ್ಯಸ್ಥಲಶಬ್ದೇನಕಾವಿ.ಕಾದಾ ವಿಚಾರ್ಯತೆ । " ಪರಬ್ರಹ್ಮವಿಷಯವೆ ಯತೋವಾ ಇತ್ಯಾದಿ ವಾಕ್ಯಾರ್ಥಕ್ಕೆ ಅನುಸರಿಸಿ, ಸ್ಥಲಶಬ್ದ ವಾಚ್ಯವಾಗಿ ಕಾವ್ಯಕಾದಿಗಳಲ್ಲಿ ವಿಚಾರಿಸಲ್ಪಡುತ್ತದೆ ಎಂಬ ಶ್ಲೋಕದಿಂದ ನಿಗಮಾಗಮಂಗಗಳ ಐಕ್ಯವನ್ನು ಹೇಳುತ್ತಾನೆ. ವ್ಯಾಸಸೂತ್ರದ ತಾತ್ಪ

CC-0. Jangamwadi Math Collection. Digitized by eGangotri

ರ್ಯಾವು ವೀರಶೈವವನ್ನು ಬೋಧಿಸುವುದರಿಂದ ಅವುಗಳಿಗೆ ಅಲ್ಲಮಪ್ರಭುವೇ ಕೆ ಟೀಕೆಯನ್ನು ಬರಯಲಿಲ್ಲ.?

ಕೇಳು ಒಂದು ವ್ಯಾಸಸೂತ್ರವೇಕೆ! ಶಿವನಿಂದನ್ಯವಸ್ತುವಿಲ್ಲೆಂಬುದು ಸತ್ಯವಿರಲು ಪುಷ್ಪದಂತನು ಮಹಿಮ್ನಸ್ತವದಲ್ಲಿ "ಋಜುಕುಟಿಲನಾನಾ ಪಥ ಜುಷಾಂನೃಣಾಮೇಕೋಗಮ್ಯಸ್ತ್ವಮಸಿ ಪಯಸಾಮರ್ಣವ ಇವ" ಎಂದು ಹೇಳಿದಂತೆ ಪಾಂಚರಾತ್ರಾದ್ಯಾಗಮಗಳೂ ಶಿವಪ್ರತಿಪಾದಕವಾಗಿವೆ. ಆದರೆ ಸ್ಪಷ್ಟವಾಗಿ ಶಿವಪ್ರತಿಪಾದಕವಲ್ಲದರಿಂದಲು, ಕ್ರಮೇಣ ಚಿತ್ತಶುದ್ಧಿ ಯನಾಗಿಸಿ ಶಿವಭಕ್ತಿಗೆ ಸಾಧನವಾಗಿದ್ದರೂ ಸಾಳವಾಗ ಬೇರೆ ಮಾರ್ಗಕ್ಕೆ ಳಸುವವಾಗಿ ಇರುವುದರಿಂದಲೂ ಉತ್ತಮಾಧಿಕಾರಿಗಳಿಗೆ ಅನಾದರಣೀಯ ವಾಗಿವೆ "ವಿಷ್ಣುಪ್ರಜಾಪತೀಂದ್ರಾಣಾಮುತ್ಕರ್ಷಂ ಶಂಕರಾದಪಿ। ಪ್ರವ ದಂತೀನವಾಕ್ಯಾನಿ ಶ್ರೌತಾನಿ ಪ್ರತಿಭಾಂತಿಚ। ಪೌರಾಣಿಕಾನಿ ವಾಕ್ಯಾನಿ ಸ್ಮಾರ್ತಾನಿ ಪ್ರತಿಭಾಂತಿಚ। ತಾನಿತತ್ತ್ವಾತ್ಯನಾ ತೇಷಾಮುತ್ಕರ್ಷಂ ಪ್ರವದಂತಿಹಿ ಶಿವನಿಗಿಂತಲು ವಿಷ್ಣುವೇನು, ಪ್ರಜಾಪತಿಯೇನು ಇಂದ್ರನೇನು ಇಂತಿವರ ಉತ್ಕರ್ಷವನ್ನು ಹೇಳುವಂತೆ ವೇದಪುರಾ ಣಸ್ಮೃತಿವಾಕ್ಯಗಳು ತೋರುತ್ತವೆ ಆದರೆ ಅವು ಆಯಾಮೂರ್ತಿಗಳಲ್ಲಿರುವ ಶಿವನ ಉತ್ಕರ್ಷವನ್ನೆ ತತ್ತ್ವರೂಪವಾಗಿ ಹೇಳುವುವು ಎಂದು ವ್ಯಾಸನು ಸೂತಸಂಹಿತೆಯಲ್ಲಿ ಹೇಳಿರುವುದರಿಂದ ವಿಷ್ಣುಪರವಾದ ಪುರಾಣಗಳಾದರು ಶಿವಪರವೆ ಆಗಿವೆ. ಆದರೂ ವ್ಯಾಸನು ಈ ಪುರಾಣಗಳಿಂದ ತನ್ನ ತೋ ಳನ್ನು ನೀಗಾಡಿದನು. ವ್ಯಾಸಸೂತ್ರಗಳಲ್ಲಿ ಸ್ಪಷ್ಟವಾಗಿ ನವಲಿಂಗ ಪ್ರತಿವಾ ದಕವಾದ, ಅಷ್ಟಾವರಣ ಪಂಚಾಚಾರಪರವಾದ, ಸೂತ್ರಗಳು ಕಂಡುಬಾರ ದರಿಂದ ಅವುಗಳನ್ನುಪೇಕ್ಷಿಸಿ ಶ್ರೀಮದಲ್ಲಮನು ತನ್ನ ವಚನಗಳನ್ನು ಅತಿ ಗಂಭೀರವಾದ ಸೂತ್ರಸರಣಿಯಿಂದ ಹೇಳಿದುದು ಯುಕ್ತವೆ.

## ಸಾಧನಾಧ್ಯಾಯ ವಿಚಾರ.

ಒಬ್ಬಾನೊಬ್ಬ ಕುಚೋದ್ಯಗಾರನು ಉದಾಹರಿಸಿದ ಅಲ್ಲಮನದೊಂದು ವಚನವು ನನಗಿಲ್ಲಿ ಸಹಾಯಕಾರಿಯಾಗಿದೆ. ಬೇರೆ ವಚನಗಳನ್ನುದಾಹ ರಿಸದೆ ಅದೇ ವಚನವನ್ನು ಇಲ್ಲಿ ತೆಗದುಕೊಂಡರೆ ಕುಚೋದ್ಯ ನಿರಾಸವಾಗಿ ವಿಷಯಪ್ರತಿಪಾದನವಾಗುವುದರಿಂದ ಅದನ್ನೇ ತೆಗೆದುಕೊಳ್ಳುವೆನು.

"ಲಕ್ಷಗಂಗೆಯ ಮೀಂದಡಿಲ್ಲ—ತುಟ್ಟ ತುದಿಯ ನೇರುಗಿರಿಯ ಮೆಟ್ಟಿಕೂಗಿದಡಿಲ್ಲ ಗುಹೇಶ್ವರ."

CC-0. Jangamwadi Math Collection. Digitized by eGangotri

ಬಾದರಾಯಣಸೂತ್ರದಲ್ಲಿ ಮೂರನೆಯಧ್ಯಾಯದ ನಾಲ್ಕನೆ ಪಾದದ ೨೫ನೆಯ ಮತ್ತು ೨೬ನೆಯ ಸೂತ್ರಗಳು "ಅತ ಏವಚಾಗ್ನೀಂಧನಾದ್ಯನಪೇಕ್ಷಾ" "ಸರ್ವಾಪೇಕ್ಷಾಚ ಯಜ್ಞಾದಿ ಶ್ರುತೇರಶ್ವವತ್" ಎಂಬಿವೆ ಈ ಸೂತ್ರಗಳನ್ನು ಶಂಕರಾಚಾರ್ಯರು "ವಿದ್ಯೆಯು ಪುರುಷಾರ್ಥಕ್ಕೆ (ಮೋಕ್ಷಕ್ಕೆ) ಹೇತುವಾಗಿರುವುದರಿಂದ ಅಗ್ನೀಂಧನಾದಿ ಆಶ್ರಮ ಕರ್ಮಗಳನ್ನು ಬ್ರಹ್ಮವಿದ್ಯೆಯು ತನ್ನ ಫಲವಾದ ಮೋಕ್ಷಸಿದ್ಧಿಗೆ ಅಪೇಕ್ಷಿಸುವುದಿಲ್ಲ. ಯಜ್ಞಾದಿಕರ್ಮಗಳು ವಿದ್ಯೆಯ ಉತ್ಪತ್ತಿಗೆ ಸಾಧನವಾಗಿವೆ. ಆದರೆ ವಿದ್ಯೆಯು ಉತ್ಪನ್ನವಾದಬಳಿಕ ಮೋಕ್ಷವು ಆ ವಿದ್ಯೆಯ ಫಲವಾಗಿರುತ್ತದೆ. ಕರ್ಮಗಳನ್ನು ಮಾಡಬೇಕಾಗುವುದಿಲ್ಲ. ಆದರೆ ವಿದ್ಯೆಯು ಉತ್ಪನ್ನವಾಗಲಿಕ್ಕೆ ಯಜ್ಞಾದಿಕರ್ಮಗಳು ಅವಶ್ಯವಾಗಿವೆ. ಕರ್ಮಗಳಯೋಗ್ಯತೆಯು ವಿದ್ಯೆಯನ್ನು ಹುಟ್ಟಿಸುವಲ್ಲಿಯದೆ. ಆದರೆ ಆ ವಿದ್ಯೆಯಫಲವನ್ನು ಕೊಡುವಲ್ಲಿ ಇಲ್ಲ, ಇದಕ್ಕೊಂದು ನಿದರ್ಶನವದೆ. ಕುದುರೆಯು ರಥವನ್ನೆಳೆಯಲಿಕ್ಕೆ ಯೋಗ್ಯತೆಯುಳ್ಳದಾಗಿದೆ; ಆದರೆ ನೇಗಿಲವನ್ನು ಎಳೆಯಲಿಕ್ಕೆ ಅದರ ತಕ್ಕು ಇರುವುದಿಲ್ಲ, ಅದರಂತೆಯೆ ಯಜ್ಞಾದಿ ಕರ್ಮಗಳಾದರು ವಿದ್ಯೆಯನ್ನು ಹುಟ್ಟಿಸಲಿಕ್ಕೆ ತಕ್ಕವಾಗಿವೆ. ಆವಿದ್ಯೆಯ ಫಲವಾದ ಮೋಕ್ಷವನ್ನೀಯಲಿಕ್ಕೆ ವಿದ್ಯೆಯು ಸ್ವತಂತ್ರವಾಗಿದೆಯಲ್ಲದೆ ಅದಕ್ಕೆ ಕರ್ಮಗಳ ಆವಶ್ಯಕತೆಯು ಇರುವುದಿಲ್ಲ, ಹಾಗು ಕರ್ಮಗಳಿಗೆ ಮೋಕ್ಷವನ್ನು ಹುಟ್ಟಿಸುವ ಯೋಗ್ಯತೆಯೂ ಇಲ್ಲ" ಎಂದು ವಿವರಿಸುವರು.

ಶ್ರೀಕಂಠಾಚಾರ್ಯರು ಸೂತ್ರಗಳನ್ನು ವಿವರಿಸುವುದು ಹೇಗೆಂದರೆ ಸನ್ಯಾಸವನ್ನು ಸ್ವೀಕರಿಸಿದವನು ಅಗ್ನೀಂಧನಾದಿ ಕರ್ಮಗಳನ್ನು ಮಾಡುವುದವಶ್ಯವಿಲ್ಲ; ಕರ್ಮತ್ಯಾಗದಿಂದಲೆ ಆತನು ವಿದ್ಯೆಯನ್ನುಸಂಪಾದಿಸತಕ್ಕದು; ಆದರೆ ಗೃಹಸ್ಥನು ಯಜ್ಞಾದಿಗಳನ್ನು ಮಾಡತಕ್ಕದು. ಬ್ರಹ್ಮವಿದ್ಯಾಸಂಪನ್ನನೆಂದು ಬಿಡತಕ್ಕದಲ್ಲ; ಯಜ್ಞಗಳು ಪರಮೇಶ್ವರನ ಆಜ್ಞೆಯಿಂದಲೆ ಸಿದ್ಧವಾಗಿವೆ. ಕುದುರೆಯು ಗಮನಕ್ಕೆ ಸಾಧನವಾಗಿದೆ ಆದರು ಅದು ಹಲ್ಲಣವನ್ನು (ಥಡಿ) ಹಾಕಿದರೆಯೆ ಗಮನಕ್ಕೆ ಸಾಧಕವಾಗುವದು. ಅದರಂತೆಯೆ ವಿದ್ಯೆಯು ಮೋಕ್ಷಕ್ಕೆಸಾಧನವಾಗಿದೆಯಾದರು ಗೃಹಸ್ಥಾಶ್ರಮಿಯು ಸ್ವಾಶ್ರಮದ ಕರ್ಮಗಳನ್ನು ಮಾಡಿದರೆ ಮಾತ್ರ ಅದು ಸ್ವಸಾಧ್ಯವಾದ ಮುಕ್ತಿಗೆ ಸಾಧನವಾಗುವದು.

ಶಂಕರಾಚಾರ್ಯ ಶ್ರೀಕಂಠಾಚಾರ್ಯರೀರ್ವರ ಮತದಲ್ಲಿರುವ ಅಭ್ಯಂತರವೆಂದರೆ—ಶ್ರೀಕಂಠಾಚಾರ್ಯನು ಗೃಹಸ್ಥನು ಕರ್ಮಗಳನ್ನು ಮಾಡಿದರೆಯೆ ವಿದ್ಯೆಯಫಲವನ್ನು ಹೊಂದಬಲ್ಲನು. ಸನ್ಯಾಸಿಯು ಕರ್ಮತ್ಯಾಗದಿಂದ

CC-0. Jangamwadi Math Collection. Digitized by eGangotri

ಬ್ರಹ್ಮವಿದ್ಯೆಯನ್ನಭ್ಯಾಸಿಸಿ ಅದರಿಂದಲೆ ಮುಕ್ತಿಯನ್ನು ಹೊಂದಬಲ್ಲನು. ಶಂಕರಾಚಾರ್ಯನು ಆಶ್ರಮಭೇದದಿಂದ ಕರ್ಮಗಳ ಅಪೇಕ್ಷೆಯನ್ನಾಗಲಿ ನಿರಪೇಕ್ಷೆಯನ್ನಾಗಲಿ ಹೇಳುವುದಿಲ್ಲ. ಅವುಗಳು ವಿದ್ಯೋತ್ಪತ್ತಿಗೆ ಬೇಕಾಗಿವೆ ಯಾವನು ಉತ್ಪನ್ನವಾದಬಳಿಕ ವಿದ್ಯೆಯು ಸ್ವಫಲವಾದ ಮೋಕ್ಷವನ್ನೀಯಲಿಕ್ಕೆ ಕರ್ಮಾನುಷ್ಠಾನವನ್ನು ಬಯಸದು. ಕರ್ಮಗಳು ಆಶ್ರಮಭೇದದಿಂದ ಬೇಕು ಬೇಡಾಗಲಾರವು.

ಶಂಕರಾಚಾರ್ಯನ ಮತದಿಂದ ಬ್ರಹ್ಮನಿಷ್ಠತ್ವವು (ಜೀವನ್ಮುಕ್ತಿ) ಗೃಹಸ್ಥಾಶ್ರಮದಲ್ಲಿ ಸಿಲುಕದರಿಂದ ಗೃಹಸ್ಥನು ಕರ್ಮದಿಂದ ವಿದ್ಯೋಪಾರ್ಜನಕ್ಕೆ ಪ್ರತಿಬಂಧಕವಾದ ಪಾಪಗಳನ್ನು ಗೆದ್ದು ಶುದ್ಧಾಂತಃಕರಣನಾಗಿ ಸನ್ಯಾಸವನ್ನು ಸ್ವೀಕರಿಸಿ ಬ್ರಹ್ಮವಿದ್ಯೆಯನ್ನು ಸಾಧಿಸತಕ್ಕದು.

ಮೂರನೆಯ ಅಧ್ಯಾಯದ ಮೂರನೆಯ ಪಾದದಲ್ಲಿ ಉಪನಿಷತ್ತುಗಳೊಳಗಿನ ಸಗುಣನಿರ್ಗುಣೋಪಾಸನೆಗಳನ್ನು ವಿಚಾರಿಸಿ ಆಯಾ ಉಪನಿಷತ್ತುಗಳಲ್ಲಿ ಹೇಳಿರುವ ಉಪಾಸನೆಗಳಲ್ಲಿ ಬೇರೆ ಶಾಖೆಯ ಉಪನಿಷತ್ತುಗಳಲ್ಲಿ ಅದೇ ವಿಷಯಕವಾದ ಉಪಾಸನೆಗಳಲ್ಲಿ ಹೇಳಿದ ಧರ್ಮಗಳನ್ನು ಕೂಡಿಸಬಹುದೊ ಬಾರದೊ ಎಂಬ ವಿಚಾರವನ್ನೂ ಅದೇ ಉಪನಿಷತ್ತಿನಲ್ಲಿ ಹೇಳಿದ ಪರಬ್ರಹ್ಮದ ಉಪಾಸನೆಗಳಲ್ಲಿ ಆ ಪರಬ್ರಹ್ಮವನ್ನು ಉಪಾಸಿಸಲಿಕ್ಕೆ ತಕ್ಕವೆಂದು ಹೇಳಿದ ಸ್ಥಾನಗಳಿಂದ ಒಂದು ಉಪಾಸನೆಯಲ್ಲಿ ಹೇಳಿದ ಧರ್ಮಗಳನ್ನು ಸ್ಥಾನಭಿನ್ನವಾದ ಅದೇ ಪರಬ್ರಹ್ಮದ ಉಪಾಸನೆಯಲ್ಲಿ ಕೂಡಿರಬಹುದೊ ಬಾರದೊ ಎಂಬುದರ ವಿಚಾರವನ್ನೂ ಇದೇ ತೆರನಾದ ಬೇರೆ ವಿಚಾರಗಳನ್ನೂ ಬಾದರಾಯಣನು ಮಾಡಿರುವನು.

ಈ ಸೂತ್ರಗಳನ್ನು ಶ್ರೀಕಂಠಾಚಾರ್ಯರೂ ಶಂಕರಾಚಾರ್ಯರೂ ತಂಮ ತಂಮ ಸಿದ್ಧಾಂತನಕ್ಕನುಸರಿಸಿ ಯೋಜಿಸಿರುವರು. ಶ್ರೀ ನೀಲಕಂಠಾಚಾರ್ಯರು ಈ ಬ್ರಹ್ಮಸೂತ್ರಗಳಿಗೆ ವೀರಶೈವ ಪರವಾದ ಭಾಷ್ಯವನ್ನು ಬರೆದಿರುವರು. ಅದರಮೇಲಿಂದಲೆ ಶ್ರೀ ನೀಲಕಂಠಾಚಾರ್ಯರೆಂಬ ಇನ್ನೊಬ್ಬರು ಕ್ರಿಯಾಸಾರವೆಂಬ ಗ್ರಂಥದಲ್ಲಿ ಆ ಭಾಷ್ಯ ಸಾರಾಂಶರೂಪವಾದ ಕಾರಿಕೆಗಳನ್ನು ಬರೆದಿರುವರು. ನಾನು ಶ್ರೀ ನೀಲಕಂಠಾಚಾರ್ಯರು ಬರೆದ ಭಾಷ್ಯವನ್ನು ಸಮಗ್ರವಾಗಿ ಓದಿಲ್ಲ. ಬಹಳ ವರ್ಷಗಳ ಹಿಂದೆ ಕೆಲವು ಭಾಗವನ್ನು ಅಂದರೆ ಚತುಃ ಸೂತ್ರಿಯ ಮಟ್ಟಿಗೆ ಓದಿರುವೆನು. ಕ್ರಿಯಾಸಾರ ಕರ್ತೃವು ಆ ಭಾಷ್ಯದಿಂದಲೆ ತನ್ನ ಕಾರಿಕೆಗಳನ್ನು ಬರೆದಿರುವುದರಿಂದ ಈ ಕಾರಿಕೆಗಳಲ್ಲಿ ಆ ಭಾಷ್ಯದ ಸಿದ್ಧಾಂತವೆ ಹೇಳಲ್ಪಡುತ್ತದೆಂಬಲ್ಲಿ ಸಂದೇಹವಿಲ್ಲ,

CC-0. Jangamwadi Math Collection. Digitized by eGangotri

ಶ್ರೀನೀಲಕಂಠಾಚಾರ್ಯರಾದರು ಮೂರನೆಯಧ್ಯಾಯದ ಆವಸೂತ್ರವನ್ನು ವೀರಶೈವಸಾಧನ ಪರತ್ವೇನಯೋಜಿಸಿಲ್ಲ ಆದರೆ ವೀರಶೈವಾಚಾರಗಳು ಬ್ರಹ್ಮವಿದ್ಯಾಂಗವೆಂದು ಅಲ್ಲಲ್ಲಿ ಸ್ವಕಂಠದಿಂದ ಹೇಳಿರುವರು. "ಅತಏವಾಶ್ರಮಾಚಾರರಾಹಿತ್ಯಂ ವೀರಶೈವಕೇ"—೨೪೪. ಆದುದರಿಂದಲೆ ವೀರಶೈವದಲ್ಲಿ ಆಶ್ರಮಾಚಾರವಿಲ್ಲ. "ಅತಸ್ತುವೀರಶೈವಾನಾಂ ಮತಮುಚ್ಛೈರ್ಹಿತಂಶ್ರುತಃ" ೩-೩೪ ಇದರಿಂದಲು ವೀರಶೈವರ ಮತವು ಗೌರವಯುಕ್ತವಾದುದು. "ವೀರಶೈವಾಚಾರಸಂಘೋ ವೀರ್ಯತ್ತರವ ಉಚ್ಯತ್ಯೇ। ಅಭೇದಂಚ ಪುರಸ್ಕೃತ್ಯಧರ್ಮಾಸ್ತೇಷುಚ ವರ್ಣಿತಾಃ॥ ವೀರಶೈವಾಚಾರ ಸಮುದಾಯವು ಆಶ್ರಮಧರ್ಮಗಳಿಗಿಂತಲು ಹೆಚ್ಚು ವೀರ್ಯವುಳ್ಳದೆಂದು ಹೇಳಲ್ಪಡುತ್ತಿದೆ ವೀರಶೈವದಲ್ಲಿ ಗುರುಲಿಂಗಜಂಗಮಗಳ ಅಭೇದವನ್ನು ಪುರಸ್ಕರಿಸಿ ಧರ್ಮಗಳು ವರ್ಣಿತವಾಗಿವೆ ಇತ್ಯಾದಿ— *

ಶ್ರೀಮದಲ್ಲಮನು ಬಾದರಾಯಣನು ಹೇಳುವ ಸಾಧನಗಳು ಲಿರಿಗಾಂಗ ಸಾಮರಸ್ಯಕ್ಕೆ ಅಷ್ಟೊಂದು ಪ್ರಯೋಜನಕಾರಿಯಲ್ಲವು. ವೀರಶೈವ ಆಗಮಗಳು ಹೇಳಿದ ಪಂಚಾಚಾರ ಅಷ್ಟಾವರಣಗಳೆ ಶಿವಜ್ಞಾನಕ್ಕೆ ಉಪಕಾರಕಗಳಾಗಿವೆಯಲ್ಲದೆ ತದತಿರಿಕ್ತವಾದ ತೀರ್ಥಸ್ನಾನಗಳಾಗಲಿ ಕ್ಷೇತ್ರಯಾತ್ರೆಗಳಾಗಲಿ ಶಿವನೊಳಗೆ ಸಮರಸಭಾವವನ್ನು ಹೊಂದಿಸಲಿಕ್ಕೆ ಶಕ್ತವಲ್ಲೆಂದು ಖಂಡಿತವಾಗಿ ಈ ಮೇಲುದಾಹರಿಸಿದ ವಚನದಲ್ಲಿ ಹೇಳುವನು. ಈ ಸಿದ್ಧಾಂತವು ಸಾಕ್ಷಾತ್ತಾಗಿ ಪರಮಾತ್ಮನ ವೀರಶೈವ ದಿವ್ಯಾಗಮದಿಂದಲು ಸ್ವಾನುಭವದಿಂದಲು ಗೋಚರಿಸುವುದಲ್ಲದೆ ಬಾದರಾಯಣ ಸೂತ್ರಗಳಿಂದ ಉಪಲಭಿಸುವುದಿಲ್ಲ. ಮದೇಕ ಶರಣಾಯೇತಿ। ಮಾಯಾಮೇತಾಂತರಂತಿತೇ॥ "ಸೂಕ್ಷ್ಮಾಗಮ" ಎನ್ನನೋರ್ವನನೆ ಶರಣು ಹೊಕ್ಕವರು ಮಾಯೆಯನ್ನು ದಾಂಟುವರು. ಸರ್ವಮನ್ಯತ್ಪರಿತ್ಯಜ್ಯಶಿವಏಕೋಧ್ಯೇಯಃ" ಉಳಿದುದನ್ನೆಲ್ಲ ಬಿಟ್ಟು ಶಿವನೋರ್ವನೆ ಉಪಾಸ್ಯನು.

ಆದುದರಿಂದ ಶ್ರೀಮದಲ್ಲಮನು ಶಿವಾನ್ಯಧರ್ಮಗಳನ್ನು ಬೋಧಿಸುವ ಶಾಸ್ತ್ರಗಳಿಂದ ಮುಮುಕ್ಷುವಿಗೆ ಪ್ರಯೋಜನವಿಲ್ಲೆಂಬುದನ್ನು ಬಾದರಾಯಣನ ಸಾಧನಾಧ್ಯಾಯವನ್ನು ನಿರಾಕರಿಸಿ ಮೇಲುದಾಹರಿಸಿದ ಈ ವಚ

---

* ಟೀಪು—ಅತೋಪಿ ವೀರಶೈವಾನಾಮಾಚಾರಾ ವೈದಿಕೋತ್ತರಾಃ॥



CC-0. Jangamwadi Math Collection. Digitized by eGangotri

ನದಿಂದ ತೋರಿಸಿರುವನು.* ಹೃದಯದಲ್ಲಿರುವ ಶಿವನನ್ನು ತಿಳಿಯಲು ಬಾಹ್ಯವಾದ ಕರ್ಮವು ಸಾಹಾಯಕವನ್ನುಂಟುಮಾಡದು. ತೀರ್ಥಯಾತ್ರೆಗಳಿಂದ ಶಿವತತ್ತ್ವವು ದೊರೆಯದು. ಅದರಂತೆಯೆ ಮನುಷ್ಯರಲ್ಲಿ ಮಾಯಾಕರ್ಮಜನ್ಯವಾದ ಜಾತ್ಯಾದಿಗಳನ್ನು ಆರೋಪಿಸುವ ಬ್ರಾಹ್ಮಣಾದಿ ವರ್ಣಧರ್ಮಗಳು ಲಿಂಗಾಂಗಸಾಮರಸ್ಯಕ್ಕೆ ಹೇತುವಾಗಲಾರವು. ಈ ವಿಷಯದಲ್ಲಿ ಶಿವರಹಸ್ಯದ ವಚನವು ಬಹಳ ಮನನೀಯವಾಗಿದೆ. "ಕಸ್ತೂರೀಮೃಗಕಾಅಪಿದ್ರುತತರಂಧಾವಂತಿ ಗಂಧಾಶಯಾ। ಸ್ವಸ್ಯಾಂಗಸ್ಥಿತ ಮಪ್ಯನೇನಹಿತರಾಂ ಜಾನಂತಿ ಮೂಢಾ ಇವ॥ ದೇಹೇಷುಸ್ಥಿತಮಪ್ಯಮೇಮುನಿಸುರಾಜಾನಂತಿನೋಮಾಂ ಯಥಾ । ತಪ್ಯತ್ತ್ರೇಪಿಮೃಗಾವಿಮೂಢಮತಯಃ ಕೈಲಾಸಶೈಲೇಮಮ॥ ೧-೧೮-೨೨ ಕೈಲಾಸಶೈಲ ವರ್ಣನೆಯಲ್ಲಿ ಪಾರ್ವತಿಯನ್ನು ಕುರಿತು ಪರಮೇಶ್ವರನಾಡಿದ ಮಾತಿದು. ಎಲೌ ಉಮೆ ! ಈ ಕಸ್ತೂರೀಮೃಗಗಳು ಗಂಧದಾಶೆಯಿಂದ ಒಳ್ಳೇ ವೇಗದಿಂದ ಓಡುತ್ತಿರುವುವು. ಆ ಗಂಧವು ತಂಮ ಅಂತರಂಗದಲ್ಲಿಯೆ ನೆಲಸಿರುವುದನ್ನು, ಆ ಮೂಢರಾದ ಸುರರೂ ಮುನಿಗಳೂ, ತಂಮ ದೇಹದಲ್ಲಿ ನಿಂತಿರುವುದನ್ನು ಹೇಗೆ ತಿಳಿಯದೆ ನನ್ನನ್ನು ಹುಡುಕುತ್ತಾ ಬಾಹ್ಯಕರ್ಮಗಳಲ್ಲಿ ರಮಿಸುವರೊ, ಅಂತೆಯೆ, ಈ ಮೃಗಗಳು ತಿಳಿಯದೆ ಗಂಧವು ಬಾಹ್ಯದಲ್ಲಿರುವುದೆಂದು ಅದನ್ನು ಹುಡುಕುತ್ತ ಓಡಾಡುವುವು.

## ಗುಹೇಶ್ವರನಾರು.

ಇರಲಿ ಮೇಲಿನವಾಕ್ಯದಲ್ಲಿ "ಬಚ್ಚಬರಿಯ ಬೆಳಗು ಗುಹೇಶ್ವರಲಿಂಗವು" ಎಂಬ ಮುದ್ರಿಕೆಯೊಳಗಣ ಗುಹೇಶ್ವರನೆಂಬ ಪದದ ಅರ್ಥವನ್ನು ಮೇಲೆ ೬೫-೬೬ನೆಯ ಪುಟದಲ್ಲಿ ಬರೆದಿರುವೆನು. ಅದೇಶಬ್ದವನ್ನು ಇನ್ನಿಷ್ಟುಮನನಮಾಡುವಣ. ಅಲ್ಲಮನು ಪ್ರತಿಯೊಂದು ವಚನವನ್ನು ಗುಹೇಶ್ವರ ಗುಹೇಶ್ವರಲಿಂಗ ಎಂದು ಗುರುತಿರ್ಸಿರುವನು. ಇದರರ್ಥವೇನು? ಗುಹೇಶ್ವರನೆಂಬೊಬ್ಬ ಗುರುವೀತನಿಗಿದ್ದನೊ? ಈ ಪ್ರಶ್ನವನ್ನು, ಬಾಹ್ಯದೃಷ್ಟಿಗಳ ಚಿತ್ತದೊಲವಿನಿಂದ ಉತ್ತರಹೇಳಬೇಕಾದರೆ ಅಲ್ಲಮನಿಗೆ ಗುರು

---

* ಇದನ್ನು ಕುಚೋದ್ಯನು ಪೂರ್ಣವಾಗುದಾಹರಿಸಿಲ್ಲ. 'ಸುತ್ತಿ ಸುತ್ತಿ ಬಂದಡಿಲ್ಲ ಲಕ್ಷಗಂಗೆಯ ಮಿಂದೊಡಿಲ್ಲ. ತುಟ್ಟತುದಿಯ ಮೇರುಗಿರಿಯ ಮೆಟ್ಟಕೂಗಿದಡಿಲ್ಲ ನಿತ್ಯನೇಮದಿಂದ ತನುಮುಟ್ಟಿಕೊಂಡಡಿಲ್ಲ. ನಿಚ್ಚಕ್ಕೆ ಮನನಂದಂದಿಗೆ ಅತ್ತಿತ್ತ ಹರಿಯುಲೀಯದೆ ಚಿತ್ತದಲ್ಲಿ ಸುಳಿಯದೆ ಬಚ್ಚ ಬರಿಯ ಬೆಳಗು ಗುಹೇಶ್ವರಲಿಂಗವು.'

CC-0. Jangamwadi Math Collection. Digitized by eGangotri

ವಿದ್ದಿಲ್ಲ. ಶಿವಾನ ಭವಿಗಳ ಮರ್ಮವನರಿತು ಮಾತನಾಡುವುದಾದರೆ ಗುಹೇಶ್ವರನೆಂದರೆ ಅಲ್ಲಮನ ಗುರುವು. ಅದು ಹೇಗೆ? ಶಿವರಹಸ್ಯವನ್ನರಿಯದ ಪ್ರಾಕೃತರು ಗುರು ತಂಮಿಂದ ಬೇರೆ ಎಂದು ತಿಳಿವರು. ಆ ದೃಷ್ಟಿಯಿಂದ ಶ್ರೀಮದಲ್ಲಮನು ಬೇರೊಬ್ಬ ದೇಹವಿಶಿಷ್ಟನಾದ ಗುರುವಿನಲ್ಲಿ ಹೋಗದರಿಂದ ಆತನಿಗೆ ಗುರುವಿದ್ದಿಲ್ಲ. ಆದರೆ ಶಿವವೇದಿಗಳ ಇಂಗಿತವು ಹಾಗಲ್ಲ. "ಅನನ್ಯಪ್ರೋಕ್ತೇ ಗತಿರತ್ರನಾಸ್ತಿ" ೨-೮-೮ ಎಂಬ ತಲವಕಾರೋಪನಿಷದ್ವಾಕ್ಯದಿಂದ ಗುರುವು ಶಿಷ್ಯನಿಂದ ಅನನ್ಯನಾಗಿರುವನು. ಮತ್ತು ಆತನು ಬೋಧಿಸುವ ಲಿಂಗತತ್ತ್ವವು ಆ ಶಿಷ್ಯನಿಂದಲು ಗುರುವಿನಿಂದಲು ಅನನ್ಯವಾಗಿಹುದು. ದೇಹದ ತೋರಿಕೆಯಿಂದ ಗುರುಶಿಷ್ಯರಲ್ಲಿ ಭೇದವು ತೋರಿದರು ಅಷ್ಟಾವರಣಮಯವಾದ ಸ್ವರೂಪವು ಗುರು, ಲಿಂಗ, ಭಕ್ತರಿಗೆ ಒಂದೆ ಇರುವುದರಿಂದ ಅವರ ಸ್ವರೂಪದಲ್ಲಿ ಭೇದವಿಲ್ಲ. ಶಿಷ್ಯನಿಗೂ ತಾನು ಬೋಧಿಸತಕ್ಕ ಪರವಸ್ತುವಿಗೂ ಭೇದವನ್ನು ಕಲ್ಪಿಸುವಾತನು ಎಂದೂ ಸದ್ಗುರುವಾಗಲಾರನು. ಈ ಅರ್ಥವನ್ನು ಕಾಠಕಶ್ರುತಿಯು ಮೇಲುದಾಹರಿಸಿದ ಮಂತ್ರದ ಆದಿಭಾಗದಲ್ಲಿ "ನನರೇಣಾವರೇಣ ಪ್ರೋಕ್ತ ಏಷಸುವಿಜ್ಞೇಯೋ ಬಹುಧಾಚಿಂತ್ಯಮಾನಃ" ಎಲ ಪ್ರಿಯತಮನಾದ ನಚಿಕೇತನೆ ತಾನು ಬ್ರಹ್ಮದಿಂದ ಬೇರೆ, ಮನುಷ್ಯನು, ಎಂಬ ಭಾವವುಳ್ಳುದರಿಂದ ಹೀನನಾದವನಿಂದ ಈ ವಿದ್ಯೆಯು ಉಪದೇಶಿಸಲ್ಪಟ್ಟರೆ, ಅಂದರೆ ಶಿವನಿಗೂ ತನಗೂ ಸಾಮರಸ್ಯವೆಯಲ್ಲದೆ ಭೇದವಿಲ್ಲೆಂಬ ಸುಜ್ಞಾನವು ಬಲಿತು ದೃಢವಾಗದ ಅಧಮನಿಂದ ಕೇವಲ ಶಬ್ದಾರ್ಥವಾಗಿ ಲಿಂಗಾಂಗ ಸಾಮರಸ್ಯವು ಬೋಧಿಸಲ್ಪಟ್ಟುದಾದರೆ ಎಷ್ಟು ಚಿಂತಿಸಿದರೂ ಈ ವಿದ್ಯೆಯು ಗೋಚರಿಸಲಾರದು ಎಂದು ಹೇಳಿದೆ.

ಅಲ್ಲಮನು ಪರಮಶಿವನ ಅವತಾರನಾಗಿಹನು. ಪರಶಿವನಲ್ಲಿ ಗುರುಲಿಂಗಜಂಗಮ ಭಕ್ತರೆಂಬ ತತ್ತ್ವಗಳು ಏಕವಾಗಿವೆ. ನೋಡು. "ನಿರುಪಮಾದ್ವಯ ಪರಬ್ರಹ್ಮನಿಜದಿರುವೆತಂ । ಗುರುಲಿಂಗಜಂಗಮ ಸುತೀರ್ಥಪ್ರಸಾದಚಿ । ದ್ವರಭಸಿತರುದ್ರಾಕ್ಷಷಣ್ಮಂತ್ರವೆನಿಸುವಷ್ಟಾವರಣ ಶರಣಸಂಗ ॥" ವೀರಶೈವಷಟ್ಸ್ಥಲ ಸಿದ್ಧಾಂತಧರ್ಮಾಚಾರ ೧೩ ಅಲ್ಲಮನು ಜೀವನೋರ್ವನು ಜೀವತ್ವವನ್ನು ದಹಿಸಿ ಅಂಗತ್ವವನ್ನು ಸಂಪಾದಿಸಿ ಲಿಂಗದಲ್ಲಿ ಬೆರೆತವನಲ್ಲ ಜೀವಭಾವದಲ್ಲಿ ಸಂಸಾರಕ್ಕೆಹೇಸಿ ಬ್ರಹ್ಮಜ್ಞನಾದ ಗುರುವನ್ನು ಹೊಂದಿ ಜೀವತ್ವವನ್ನು ಹರಿಸು ಅಂಗತತ್ತ್ವವಾಗಿ ಲಿಂಗತತ್ತ್ವದಲ್ಲಿ ಜಲದೊಳು ಜಲದಂತೆ ಬೆರೆತವನಲ್ಲ. ಆದರೆ ಅನಾದಿ ಗುರುಲಿಂಗಜಂ

CC-0. Jangamwadi Math Collection. Digitized by eGangotri

ಗಮ ಸ್ವರೂಪವಾದ ಅಲ್ಲಮನಲ್ಲಿ ಹೃದಯದ ಅರಿವೆ ಅವಾಗಲೂ ಗುರುವೆ ನಿಸಿ ಗುಹೇಶ್ವರನೆನಿಸಿಕೊಂಡಿತು.

## ಬಸವಾಲ್ಲಮರುಗಳು.

ಇಂತನಾದಿ ಪರಶಿವನೊಳೇಕರೂಪನಾದ ಪ್ರಭುವನ್ನು ಆ ಪರಶಿವ ಯೋಗನಿಷ್ಠನಾಗಿ ತನುಕರಣಗಳಲ್ಲಿ ಪರಶಿವನ ಸಾಮರಸ್ಯವನ್ನುಹೊಂದಿ ಬಸವನೆ ಬಲ್ಲನಲ್ಲದೆ ಉಳಿದವರಿಗಲ್ಲಮನು ದೊರಕನು. ಅನಾದಿ ಭಕ್ತನೆ ಬಸವನು. ಅನಾದಿ ಭಕ್ತನೆ ಅನಾದಿಜಂಗಮದ ಗುರುತನ್ನು ಬಲ್ಲನು. ಭಕ್ತಜಂಗಮವೆಂಬೆರಡು ತತ್ತ್ವಗಳು ಒಂದೆಯಾಗಿವೆ. ಒಬ್ಬಾನೊಬ್ಬ ಪುರುಷನು ಅನೇಕವಿಕಾರಗಳನ್ನು ಹೊಂದಿರಲು ಅವನ ಬಾಂಧವರು, ಸ್ನೇಹಿತರು, ಆ ವಿಕಾರಗಳಿಂದ ಅವನನ್ನು ಮರೆವರು, ಆದರೆ ಪತಿವ್ರತಾಶಿರೋಮಣಿ ಅವನ ಕಾಂತೆಯು ಅವನು ಬೇಕಾದ ಸ್ಥಿತಿಯಲ್ಲಿರಲಿ, ಕಾಮ ಸುಂದರಗಾತ್ರನಾಗಿರಲಿ ವಿರೂಪವನ್ನು ಹೊಂದಿರಲಿ ಅವನಗುರುತ ಹಿಡಿವಳು. ಚಂದ್ರಮನು ಮೋಡಗಳಿಂದ ಮುಸುಕಿದವನಾಗಲು ಚಂದ್ರಶಿಲೆಯು ಒಸರಲಿಕ್ಕಿಲ್ಲ. ಆದರೆ ಚಕೋರವು ಚಂದ್ರನನ್ನು ಮರೆಯದು. ಭಕ್ತಜಂಗಮದ ಏಕತ್ವವು ಜಗತ್ತಿನಲ್ಲಿ ಗೋಚರವಾಗಲಿಕ್ಕೂ, ತನ್ನರೂಪವು ಮಾಯಾಂಧಜೀವರುಗಳಿಗೋಚರ ವೆಂಬಿದನ್ನರುಹಿಸಲಿಕ್ಕೂ ಒಂಮೆ ಬಸವನ ಅರಮನೆಗೆ ಅಲ್ಲಮನು ವಿಕೃತವೇಷದಿಂದ ಬಂದನು. ಇದನ್ನು ಲೀಲಾಕಾರನ. ಅನೆಯ ಗತಿಯಲ್ಲಿ ಸರಸವಾಗಿ ವರ್ಣಿಸಿರುವನು. ಪ್ರಭುಲಿಂಗಲೀಲೆಯನ್ನು ಸಂಸ್ಕೃತಕ್ಕೆ ಪರಿವರ್ತಿಸಿದ ಸಿದ್ಧವೀರಕರಕಂಜಾತನು ಆದನ್ನೆ ಇಪ್ಪತ್ತೆರಡನೆಯಧ್ಯಾಯದಲ್ಲಿ ಬಣಿಸಿರುವನು.

ಒಂದುದಿವಸ ಬಸವನು ಇಷ್ಟಪ್ರಾಣಭಾವಲಿಂಗಗಳ ಸಮಾಧಿಯಲ್ಲಿರಲು ಅಲ್ಲಮನು ತೋರಿ ವಿಭೂತಿಯನಿತ್ತನು. ಬಸವನು ಪ್ರಭುವು ಸಮಾಧಿಯಲ್ಲಿ ಸಂದರ್ಶನವನ್ನಿತ್ತು ವಿಭೂತಿಯನ್ನು ದಯಗೆಯ್ದುದರಿಂದ ತೀವ್ರದಲ್ಲಿಯೆ ಆ ಮಹಿಮನು ತನಗೆ ಪಾದದರ್ಶನನೀವನೆಂದು ನಂಬಿದನು—ಪುರವೆಲ್ಲ ಶೃಂಗಾರವಾಯ್ತು. ಪ್ರಭುವು ಬರಲೊಲ್ಲನು ಕನಸನ್ನನಂಬಿ ಬಸವನು ಪುರವಸಿಂಗರಿಸಿದುದಕ್ಕೆ ವಾದಿಗಳು ನಗೆಯನೆಬ್ಬಿಸಿದರು. "ಬೊಟ್ಟದನಿತು ವಿಭೂತಿಯಿಟ್ಟರೆ। ಬೆಟ್ಟದನಿತುಪಿಶಾಚತನವಳ। ಪಟ್ಟ ನಿಲುವುದು ದಿಟವಲಾ ಬರಿದೇಕೆ ಪುರದೊಳಗೆ। ಕಟ್ಟಿಸಿದ ಗುಡಿಗಳನು ಬಸವನ। ಕಟ್ಟಳೆಯು ಜಂಗಮದ ಮುಟ್ಟಿಸಿದ ದಾ ಹದನವಾಗಳೆ ಖಳರು ಬಿಜ್ಜಣಗೆ॥ ಕನಸಿನಲಿಪಕ್ವಾನ್ನಫಲಗಳ। ಘನ

CC-0. Jangamwadi Math Collection. Digitized by eGangotri

ಶರವ ಕಂಡೆದ್ದುಕರೆಬಿ । ದ್ದಿನರಿಗುಣಲಿಕ್ಕೆಂಬರಂತೀಬಸವದಂಡೇಶ ॥ ತನಗೆ ಶುಭಸೂಚನೆಗಳೊದಗಿದ । ವೆನುತವಿಭವದಲಿದಿರುಹೋದನು । ಜನಪ ಚಿತ್ರೈಸೆಂದರಾ ಲಾವಕರುಬಿಜ್ಜಣಗೆ ॥ ” ಪ್ರಭುಲಿಂಗಲೀಲೆ.

ಆಗ ಪ್ರಭುವು ಮಾಯಾಚ್ಛನ್ನರಿಗೆ ತಿಳಿಯದ ವಿಕಾರಾಕಾರವನ್ನು ಹೊಂದಿ ಕಲ್ಯಾಣಕ್ಕೆಯ್ತಂದನು. “ ಮತ್ವೇತಿಚಿನ್ಮಯವಪುಃಸ್ವಯಮಪ್ಯಧೀಶಃ । ಪ್ರೋನ್ಮತ್ತವೇಷಭೃದಯಂಗುರುಮಂಡಲೇಂದ್ರಃ ॥ ಸಾಕ್ಷಾದ್ವಭೂವಬಸವಾಧಿ ಗಣಾಧಿನಾಥೈರ್ಜ್ಞೇಯೋನಪಾಮರಜನೈರ್ವಿಷಯೈಕಲುಬ್ಧೈಃ ॥ ” ಸಂಸ್ಕೃತಪ್ರಭುಲಿಂಗಲೀಲೆ. ಆ ವಿಕಾರವೇಷವನ್ನು ಬಸವನು ವರ್ಣಿಸಿರುವನು.--“ಕೆದರಿದ ತಲೆಯ, ನಡುವುತೊನೆವ, ಹಣೆಯ ಬುಗುಟನ ಕರಸ್ಥಲದ ಅನಿಮಿಷದಿಂ ಬಹಿರಂಗದ ವದನ ತಪ್ಪಿ ಇದುರಿಗೆ ಹೋಯಿಲುತಾಗಿ ಪುರ್ಬೊಡೆಮ ಕಣ್ದೆರೆದು ಕಿವಿಹರಿದು ಜೋಲುವಾರಕ್ತಧಾರೆಯ, ಗಾಳಿಯ ಧೂಳಿಯ ಮಳೆಯ ಜೋರಿನ, ಬೆನ್ನಬಾಸಳದ, ಎಡದ ಬದಿಯ ಮುಳ್ಳುದರಹಿನ ಕಂಕುಳಸಿಳ್ಳು ಕಂಡು, ನೋಡುವಜನರು ಬೆರಗಾಗಿ ಪೊರೆವಾರಿನ ಮುಸಿಯ ದಿಗಂಬರದ ಬಣಗು ಸುರಿವುತ್ತ ಆಪ್ಯಾಯನವರಿತು ಬಿದ್ದು ಮೊಳಕಾಲೊಡೆದು ಹೊಸಹುಂಣಿನ ರಕ್ತದ ಜೋರುವ ಮುಂಗಾಲಕಣೆಹೊಳದು, ಕಣಕಾಲುಸಂದುತಪ್ಪಿದಬಿರುಬೇನೆಯ ಎಡಹಿ ಬಟ್ಟೊಡೆದ ಗಾಯದ ಉರುಡೊಂಕದ, ಬಿರುಗುಂಟನ ನೋಡ ಚೆನ್ನಬಸವಂಣ, ಅತ್ಯಂತ ಮಲಿನ ಕೂಡಲಸಂಗಮದೇವರ ಕುರುಹು ವಿಪರೀತ ನೋಡುವರೆ ಭಯಂಕರವಾಗಿದೆ ನೋಡಯ್ಯ ”

ಕಬ್ಬುಡೊಂಕಾದರೆ ಹಾಲುಡೊಂಕೆಂದು ಆರು ಬಿಡುವುದಿಲ್ಲ. ಅದರಂತೆಯೆ ಹೊರಗಣ ವೇಷವೆಂತಿದ್ದರೇನು “ ಕರಸ್ಥಲದ ಅನಿಮಿಷದೃಷ್ಟಿಯುಳ್ಳ ” ಈ ಮಹಿಮನು ತಾನು ಅರಸುತ್ತಿರುವ ಅಲ್ಲಮನೆಂದೆ ಬಗೆದು ಬಸವನು ಆತನನ್ನು ವಂದಿಸಿದನು. ಮೈಯೆಲ್ಲ ಲಿಂಗವುತುಂಬಿ ಅಂಗದ ಗುಣಂಗಳು ಬರಿದಾದ ಶಿವಶರಣರಲ್ಲಿ ಲಿಂಗಾತ್ಮತೆಯನ್ನು ಕಾಣಬೇಕಲ್ಲದೆ ಬೇರೆ ಬಗೆಯಲಾಗದು.

## ಈವಿಕೃತವೇಷವೇಕೆ ?

ಬಾಹ್ಯಶರೀರದ ಅಮಂಗಲತ್ವವನ್ನು ಚೆನ್ನಾಗಿ ಬೀರಿ ಲಿಂಗನಿಷ್ಠೆಯನ್ನು ಬೆಳೆಯಿಸಲಿಕ್ಕೆ ಅಲ್ಲಮನ ಈ ವಿಕೃತ ವೇಷವು. ವಿಷಯಲೋಲುಪರಿಗೆ ಶರೀರಾತ್ಮತೆಯು ಅಂದರೆ ಶರೀರವೆ ತಾನೆಂಬ ಭಾವವು ನಿರಾಕ

CC-0. Jangamwadi Math Collection. Digitized by eGangotri

ರಿಸಲಿಕ್ಕೆ ಬಾರದುದಾಗಿದೆ. ಅದರ ಮಾಲಿನ್ಯವನ್ನು ಬಿಚ್ಚಿಹೇಳುವ ಅನಂತವಚನಗಳು ಆಧ್ಯಾತ್ಮಿಕಶಾಸ್ತ್ರ ಗ್ರಂಥಗಳಲ್ಲಿ ಉಪಲಭಿಸುತ್ತವೆ "ಮಾಂಸಾಸೃಕ್ಪೂಯವಿಣ್ಮೂತ್ರ ಸ್ನಾಯುಮಜ್ಜಾಸ್ಥಿ ಸಂಹತೌ। ದೇಹೇಚೇತ್ಪ್ರೀತಿಮಾನ್ಮೂಢೋಭವಿತಾನರಕೇಪಿಸಃ ॥ ಸ್ವದೇಹಾಶುಚಿ ಗಂಧೇನನವಿರಜ್ಯೇತಯಃ ಪುಮಾನ್ ವಿರಾಗಕಾರಣಂತಸ್ಯ ಕಿಮನ್ಯದುಪದಿಶ್ಯತೇ" ವಿಷ್ಣುಪುರಾಣಃ. ರಕ್ತಮಾಂಸ ಮಲಮೂತ್ರಗಳಿಂದ ತುಂಬಿದ ಶರೀರದಲ್ಲಿ ಪ್ರೀತಿಯುಳ್ಳ ಹೆಡ್ಡನು ನರಕದಲ್ಲಾದರು ಇರಲಾಪನು. ತನ್ನ ದೇಹದ ದುರ್ಗಂಧವನ್ನುಕಂಡು ವಿರಕ್ತನಾಗದವನಿಗೆ ಬೇರೊಂದು ವಿರಕ್ತಿಯ ಕಾರಣವನ್ನು ಹೇಳಲು ಶಕ್ಯವಲ್ಲ. "ಯಸ್ಯಾತ್ಮಬುದ್ಧಿಃ ಕುಣಪೇತ್ರಿಧಾತುಕೇ -----ಸಏವಗೋಖರಃ. ಆವಾತನು ವಾತಪಿತ್ತಶ್ಲೇಷ್ಮವೆಂಬ ಮೂರುಧಾತುಗಳುಳ್ಳ ಈ ಹೆಣದಲ್ಲಿ ತಾನೆಂಬ ಬುದ್ಧಿಯನ್ನು ಮಾಡುವನೊ ಆತನು ಪಶುಗಳಲ್ಲಿಯು ಬಿರುಸಾದವನು "ಅಥಾನ್ಯತ್ರಾಪ್ಯುಕ್ತಂ ಶರೀರಮಿದಂ ಮೈಥುನಾದೇವೋದ್ಭೂತಂ ಸಂವೃಧ್ಯುಪೇತಂ ನಿರಯೇಥ ಮೂತ್ರದ್ವಾರೇಣನಿಷ್ಕ್ರಾಂತಮಸ್ಥಿಭಿಶ್ಚಿತಂ ಮಾಂಸೇನಾನುಲಿಪ್ತಂ ಚರ್ಮಣಾವನದ್ಧಂ ವಿಣ್ಮೂತ್ರ ಪಿತ್ತಕಫ ಮಜ್ಜಾ ಮೇದೋವಸಾಭಿರನ್ಯೈಶ್ಚಾಮಯೈರ್ಬಹುಭಿಃ ಪರಿಪೂರ್ಣಂಕೋಶ ಇವವಸುನಾ" ಮೈತ್ರ್ಯುಪನಿಷತ್-ಈಶರೀರವು ಸ್ತ್ರೀಪುರುಷ ಮೈಥುನದಿಂದ ಹುಟ್ಟಿದುದು. ಅಂಗಪ್ರತ್ಯಂಗಕೇಶನಖಾದಿಗಳಿಂದ ಘಟಿತವಾದುದು. ನರಕರೂಪವಾದ ಗರ್ಭದಲ್ಲಿ ಬೆಳೆದುದುನಂತರ ನವಮಾಸಕ್ಕಾಗಲಿ ದಶಮಾಸಕ್ಕಾಗಲಿ ಹೆಚ್ಚುದಿನಗಳಿಗಾಗಲಿ ಮೂತ್ರದ್ವಾರದಿಂದ ಹೊರಗೆ ಬಂದುದು. ಎಲುವು ಮಾಂಸಚರ್ಮಗಳಿಂದ ತುಂಬಿದುದು. ಮಲಮೂತ್ರ ಮಜ್ಜಾ ಮೇದಸ್ಸುಗಳಿಂದ ಪೂರ್ಣವಾದುದು. ಭಂಡಾರದಲ್ಲಿ ವಿತ್ತವು ತುಂಬಿದಂತೆ ಈ ದೇಹದಲ್ಲಿ ಮೇಲೆವಿವರಿಸಿದ ಮಲಿನವೆ ತುಂಬಿದೆ.

ಸಂಸಾರ ಲೋಲುಪರಾದ ದಾರುಕವನಸ್ಥರಿಗೆ ಜುಗುಪ್ಸೆಯನ್ನುಂಟು ಮಾಡಲಿಕ್ಕೆ ನಗ್ನನಾಗಿ ಚರಿಸಿದ ಪರಮೇಶನಂತೆ ಪ್ರಭುವು ಮಲಿನವೇಷದಿಂದ ಮುಮುಕ್ಷುಗಳಿಗೆ ದೇಹದಲ್ಲಿ ಅನಾದರವನ್ನುಂಟು ಮಾಡಿ ಈ ದೇಹ ಸಂಗತಿಯ ಪರಮಫಲವು ಲಿಂಗಲಾಭವೆಂಬುದನ್ನು ಇಷ್ಟಲಿಂಗದಲ್ಲಿ ನಟ್ಟ ದೃಷ್ಟಿಯಿಂದ ತೋರಿಸಿದನೆಂಬುದು ಅತಿ ಸಮರ್ಪಕವು.

## ಪ್ರಭುವು ಪರಮಸ್ವತಂತ್ರನು.

ಅಲ್ಲಮ ನಿಗೆ ಪ್ರಭುವೆಂಬ ನಾಮವು ಭುವನಪ್ರಸಿದ್ಧವಾದುದು. ಆವನ ಪರಮಸ್ವಾತಂತ್ರ್ಯವನ್ನು ತೋರಿಸಲಿಕ್ಕೆಯೆ ಶರಣರು ಈ ನಾಮಧೇಯ

CC-0. Jangamwadi Math Collection. Digitized by eGangotri

ವನ್ನು ಅವನಲ್ಲಿ ವ್ಯವಹರಿಸಿದರು. ಮುಮುಕ್ಷುಗಳ ಬೋಧೆಗಾಗಿ ಈಗ ವಿಸ್ಪೃತ ವೇಷವನ್ನು ಧರಿಸಿದಂತೆ ಹಿಂದೆ ಮಾಯೆಯನ್ನು ಗೆಲ್ಲಲಿಕ್ಕೆ ವಿಲಾಸ ವೇಷವನ್ನೂ ಧರಿಸಿದನು. ವಿರಕ್ತನೈಸೆ ಪ್ರಭುವು ಅಂದಬಳಿಕ ವಿರಕ್ತರಿಗೆ ಸಲ್ಲದ ಈ ವೇಷವನ್ನೇಕೆ ಧರಿಸಿದನು? ಎಂದು ನುಂದಾಧಿಕಾರಿಗಳು ಶಂಕಿಸಬಹುದಾಗಿದೆ. ಪ್ರಭುವಿಗೆ ವಿರಕ್ತಿಯು ಕಾರಣಾಂತರದಿಂದ ಹುಟ್ಟಿದುದಲ್ಲ ಅವನಲ್ಲಿ ನಿಸರ್ಗಸಿದ್ಧವಾದುದು. ಶಿವನಲ್ಲಿ ಮಾಂಗಲ್ಯವು ಕಾರಣಗಳಿಂದ ಹುಟ್ಟಿದುದಲ್ಲ ಅದು ಆತನ ಸ್ವರೂಪವೆ ಆಗಿದೆ. ಸ್ವರೂಪದಿಂದಲೆ ಮಂಗಳನಾದ ಶಿವನಿಗೆ, ಸ್ವತಂತ್ರತೆಯ ಒಂದು ಚಿಹ್ನವಾಗಿ ಸರ್ವಸಂಹಾರಕತ್ವದ್ಯೋತಕವಾದ ಅಸ್ಥಿಮಾಲೆಯೂ, ಸರ್ವನಿಯಾಮಕತ್ವದ್ಯೋತಕವಾದ ನಾಗವೂ ಇರುವವು. ಇತರರಿಂದ ಸ್ಪರ್ಶಿಸಲು ಯೋಗ್ಯವಲ್ಲದ ಅಸ್ಥಿಯೊಂದಲ್ಲ ಅಸ್ಥಿಮಾಲೆಯು ಶಿವನಿಗೆ ಅಮಾಂಗಲ್ಯ ಹೇತುವಲ್ಲ ಆದರಿಂದಲೆ ಪುಷ್ಪದಂತನ "ಶ್ಮಶಾನೇಷ್ವಾ ಕ್ರೀಡಾಸ್ಮರಹರ." ಇತ್ಯಾದಿ ಸ್ತವವು.

ಪ್ರಯತ್ನಪೂರ್ವಕವಾಗಿ ವಿರತಿಯನ್ನು ಹೊಂದಿದ ಮನುಷ್ಯರಿಗೆ ಪೂರ್ವದ ಕಾಮವಾಸನೆಗಳನ್ನು ಉದ್ಬೋಧಿಸುವ ವೇಷವು ಸಲ್ಲದಾಗಿದೆ. ಆದರೆ ಮಾಯೆಯನ್ನು ಗೆಲ್ಲಲನುವಾದ ಅಲ್ಲಮನು ಈ ವೇಷದಿಂದ ಹೆಚ್ಚು ಶೋಭಿಸಿದನು. ಸ್ತ್ರೀವಿಷಯಕ ಮೋಹವೆಂಬ ಮಾಯೆಯನ್ನು ಎದುರುನಿಂತು ಗೆಲ್ಲುವವರು ಅತಿವಿರಳರು ದುರ್ಬಲರು ತಮ್ಮ ಹಸುಳತನದಲ್ಲಿ ಮೊಲೆಯೂಡಿಸಲಹಿದ ಸ್ತ್ರೀರೂಪವನ್ನು ಆದರ ದೋಷ ಚಿಂತನದಿಂದಲ್ಲದೆ ಗೆಲ್ಲಲರಿಯರು. ಇಂಥ ಮಂದಮತಿಗಳಿಗಾಗಿ ಯೋಗವಾಸಿಷ್ಠದ ವೈರಾಗ್ಯ ಪ್ರಕರಣದಲ್ಲಿ "ಮಾಂಸಪಾಂಚಾಲಿ ಕಾಯಾಸ್ತು ಯಂತ್ರಲೋಲೇಂಗಪಂಜರೇ। ಸ್ನಾಯ್ವಸ್ಥಿಗ್ರಂಥಿಶಾಲಿನ್ಯಾಃ ಸ್ತ್ರಿಯಾಃ ಕಿಮಿವ ಶೋಭನಂ॥ ತ್ವಙ್ಮಾಂಸರಕ್ತಬಾಷ್ಪಾಂಬು ಪೃಥಕ್ಕೃತ್ವಾ ವಿಲೋಚನೇ। ಸಮಾಲೋಕಯ ರಮ್ಯಂ ಚೇತ್ಕಿಂ ಮುಧಾಪರಿಮುಹ್ಯಸಿ॥ ಇತ್ಯಾದಿ ಹೇಳಿಯದೆ. ಇದನ್ನೆ ಶ್ರೀಮನ್ನಿಜಗುಣನು "ಮನುಜನೀನೆಡೆವಿಡದನುದಿನ ಪಿಳಿಸುವ। ವನಿತೆಯೊಳೆಣಿಸಲೊಂದನಿಸು ಲೇಸಹುದೆ॥ ಪಲ್ಲ॥ ಮೊಲೆಯ ಮಾಂಸವನು ಮುಡಿಯನಪಿರನು ದೇಹ। ದೆಲುವನು ಮುಸುಕಿದ ಪಸಿಯ ತೊವಲವನು। ಫಲವೆಡೆಯ ನರವನು ಬೇರೆ ಬೇರೆ ನೀನಲಸದರಿದು ನೋಡು ಲಲನೆ ಮೋಹನವೆ" ಇಂತಿದೆ ಮೊದಲಾಗಿ ಕನ್ನಡದಲ್ಲಿ, ಕಾಣಿಸುವಂತೆ ಹೇಳಿರುವರು.

ಆದರೆ ನಿಜವಾದ ಸಿದ್ಧವಿರತನಿಗೆ ಇದು ಅಬಲಮಾರ್ಗವಾಗಿದೆ, ನಿಜವಿರತನ ಪದ್ಧತಿಯು ಶ್ರೀಮನ್ನಿಜಗುಣನ "ಸೋಲದಾತನೆ ವಿರತನು

CC-0. Jangamwadi Math Collection. Digitized by eGangotri

ಮನದೊಳಗೆ। ಬಾಲೆಯರ ಸಿಂಗರವನು ಕಂಡು ॥ಪಲ್ಲ॥ ಮುರಿದುನೋಡುವ ನೋಟದ । ಮುಗುಳ್ನಗೆಯು । ಸರಸದಿನಿಗಲೆಯನುಡಿಯು । ಸನ್ನೆ । ವೆರಸಿ ತೋರುವಭಾವದ ಮೋಹಮುಂ। ಬರಿವಸೊಬಗಿನ ಸುದತಿಯು ಕಂಡು ॥ ೪॥ ಮನವನಳ್ಕಿರಿವುದೊಂದು ಭಯುವಿಲ್ಲ । ದನುಕೂಲೆನೀರೆತನ್ನ । ನೆಳಸಿ। ವಿನಯವಾಂತಿರಲಳುಕದ ನಿಜಧೈರ್ಯ । ವನು ಶಂಭುಲಿಂಗದಿಂದ ಪಡೆದು ॥ ೫ ॥ ಎಂದು ವರ್ಣಿಸಿರುವನು. ಸ್ತ್ರೀಯು ಮೋಹಿಸಿ ಮೇಲುವರಿಯಲು ಪುರುಷನು ಆಕಾರದಿಂದಲು, ವೇಷದಿಂದಲು, ನೇಪಥ್ಯದಿಂದಲು ( ಡ್ರೆಸ್ ) ಮನೋಹರನಾಗಿರಬೇಕು. ಆದುದರಿಂದ ತನ್ನಲ್ಲಿ ಸ್ವಭಾವಸಿದ್ಧವಾದ ವಿರತಿಯನ್ನು ಮುಮುಕ್ಷುಗಳಿಗೆ ಆದರ್ಶವನ್ನಾಗಿಡಲಿಕ್ಕೆ ಈ ಮೋಹಕ ರೂಪವನ್ನು ಪ್ರಭುವಾಂತನು ಬಾಹ್ಯದ ಮೋಹಕರೂಪದಿಂದಾಗಲಿ ವಿಕೃತ ವೇಷದಿಂದಾಗಲಿ ಅಲ್ಲಮನ ನಿಜಸ್ವರೂಪಕ್ಕಾವ ಉಪಾಧಿಗಳಿಲ್ಲ ಇಂತಹ ಸಹಜ ವಿರಕ್ತಿಯು ಪರಶಿವಾಂಶವಲ್ಲದವನಿಗೆ ಸಾಧ್ಯವಿಲ್ಲ.

ಅಲ್ಲಮನ ಈ ಜಗದ್ಗುರುತ್ವ ಪ್ರಕರಣವನ್ನು ಮುಗಿಸುವಷ್ಟರಲ್ಲಿ ಆತನಿಂದ ಬೋಧೆಹೊಂದಿ ಕೃತಾರ್ಥರಾದ ಹಲವರ ವಿಷಯವಾಗಿ ಬರೆಯಬೇಕಾಗಿದೆ. ಸಿದ್ಧರಾಮ ಬಸವ, ಚೆನ್ನಬಸವ, ಮಹಾದೇವಿಯಕ್ಕ, ಮಾಚಿತಂದೆ. ಮರುಳುಶಂಕರದೇವ, ನಾಗಾಂಬಿಕೆ ಮುಂತಾದವರು ಬೋಧೆಯನ್ನು ಹೊಂದಿದರು. ಇದರಂತೆಯೆ ಮುಕ್ತಾಯಕ್ಕ ಗೋರಕ್ಷ ಮೊದಲಾದವರು ಪ್ರಭುವಿನ ಬೋಧಾಮೃತದಿಂದ ಶಾಶ್ವತವಾದ ಮೋಕ್ಷಪದವಿಯು ಹೊಂದಿದರು.

## ಮುಕ್ತಾಯಕ್ಕನೂ ಗೋರಕ್ಷನೂ.

ಮಂದಬುದ್ಧಿಗಳು ಸಂಶಯವನ್ನು ಹೊಂದುವುದೊಂದುತೊಡಕನ್ನು ಕಳೆಯುವುದು ಇಲ್ಲಿ ಉಚಿತವಾಗಿದೆ. ಶ್ರೀ ಬಸವಾದಿಗಳು ಶ್ರೀಸಂಗಮಾದಿಗಳಿಂದ ಲಿಂಗಸಂಗಿಗಳಾಗಿದ್ದರು. ಅವರ ಶಂಕೆಯನ್ನು ಪ್ರಭುವು ನೀಗಿಸಿ ಜ್ಞಾನ ಬೋಧವನ್ನು ಮಾಡಲಿ! ಆದರೆ ಸಂಸ್ಕೃತಪ್ರಭುಲಿಂಗಲೀಲೆಯ ೧೨ನೆಯಧ್ಯಾಯದಲ್ಲಿ ಮುಕ್ತಾಯಿಯ ವಿಷಯಕ್ಕೆ"ಇತಿ ಪ್ರಪನ್ನಾಂಶರಣಂ ಪ್ರಭುಃಸ್ವಯಂ ಪ್ರಸನ್ನಚೇತಾಃ ಕರುಣಾರಸಾನ್ವಿತಃ । ಅಥಾನುಜಗ್ರಾಹಸವೇದದೀಕ್ಷಯಾಶಿರಃ ಸ್ಪೃಶಸ್ದಿವ್ಯ ಕಟಾಕ್ಷ ವೀಕ್ಷಯಾ ॥ ದಿದೇಶವಾಚಾಪಿ ನಚಾಲಯಕ್ತವಾ " ಇತ್ಯಾದಿ ಹೀಗೆ ತನ್ನನ್ನು ಶರಣಾಗತಳಾದ ಮುಕ್ತಾಯಕ್ಕನನ್ನು ಪ್ರಸನ್ನಾಂತಃಕರಣನಾದ ಪ್ರಭುವು ಕರುಣಾರಸವುಳ್ಳಾತನಾಗಿ ಆಕೆಯುಮಸ್ತಕವನ್ನು ಮುಟ್ಟಿ ಕರುಣಾ ದೃಷ್ಟಿಯಿಂದ ವೇದದೀಕ್ಷೆಯಿಂದನುಗ್ರಹಿಸಿದನು; ಎಂದೂ, ಗೋರಕ್ಷನನ್ನು ಕುರಿತು ...ನೆಯ

CC-0. Jangamwadi Math Collection. Digitized by eGangotri

ಧ್ಯಾಯದಲ್ಲಿ "ತದ್ರಕ್ಷಮಾಂ ಪ್ರಭುಗುರೋ ಶಿವದೀಕ್ಷಯೇತಿಗೋರಕ್ಷನಾಥ ವಿನುತೋಭವದಕ್ಷರೇಶಃ॥ದೀಕ್ಷಾಂ ಮನುಷ್ಯ ಕೃಪಯಾತಮನುಗ್ರಹೀತುಂ ಶಿಕ್ಷಾಕ್ರಮೈಸ್ತಮಥ ಲಕ್ಷವಿಧೈಃ ಪರೀಕ್ಷ್ಯ। ಪ್ರಕ್ಷೀಣಸಿದ್ಧಿಜಡಿಮ ಗ್ರಥ ನಾಯ ತಸ್ಮೈ ಮೋಕ್ಷಪ್ರದಂ ಸಮುದಿಶದ್ಗುಣಶೂನ್ಯತತ್ತ್ವಂ॥ಸಿದ್ಧಿಶಾಸ್ತ್ರ ಗಳನ್ನು ಚೆನ್ನಾಗಿಬಲ್ಲ ಗೋರಕ್ಷನು, ಗುರುವಾದ ಪ್ರಭುವೆ ನನ್ನನ್ನು ಶಿವದೀಕ್ಷೆ ಯಿಂದ ರಕ್ಷಿಸು ಎಂದು ಸ್ತುತಿಸಿದನು. ಆಗ ಕ್ಷಯರಹಿತನಾದ ಮತ್ತು ಸರ್ವನಿಯಾಮಕನಾದ (ಅಕ್ಷರೇಶಃ) ಪ್ರಭುವು ಅವನನ್ನು ಅನುಗ್ರಹಿಸಲಿ ಕ್ಕೆಲಕ್ಷ ವಿಧಗಳಿಂದ ಪರೀಕ್ಷಿಸಿದನು ಗೋರಕ್ಷನಲ್ಲಿ ಸಿದ್ಧಿಗಳದೆಸೆಯಿಂದಾ ದ ಹೆಮ್ಮೆಯ ಹೆಡ್ಡತನದ ಗಂಟು ಬಿಚ್ಚಿಹೋಗಿದೆಯೆಂದು ನಿಶ್ಚಯವಾದಬ ಳಿಕ, ಅವನಿಗೆ ಮೋಕ್ಷವನ್ನುಂಟುಮಾಡುವ ಶೂನ್ಯತತ್ತ್ವವನ್ನು ಬೋಧಿಸಿದ ನು, ಎಂದೂ ಹೇಳಿಯದೆ. ವಿರಕ್ತನಾದ ಅಲ್ಲಮನಿಗೆ ದೀಕ್ಷೆಯನ್ನುಮಾಡು ವ ಅಧಿಕಾರ ವೆಲ್ಲಿಯದು?

ಕನ್ನಡ ಪ್ರಭುಲಿಂಗಲೀಲಾಕಾರನು ತನ್ನ ಚರಿತ್ರಕ್ಕೆ ಸಂಬಂಧಿಸಿ ದುವಾದ ವಚನಗಳನ್ನು ಅಲ್ಲಲ್ಲಿ ಉದಾಹರಿಸಿ ಕಥೆಯನ್ನು ಬರೆದಿರುವನು. ಆದುದರಿಂದ ಆಚರಿತ್ರವು ಹೆಚ್ಚು ವಿಶ್ವಸನೀಯವಾಗಿದೆ. ಮುಕ್ತಾಯ ಕ್ಕನ ವಿಷಯದಲ್ಲಿ ದೀಕ್ಷಾವಿಷಯವು ಅದರಲ್ಲಿ ಬಂದಿಲ್ಲ. ಆದರೆ ಗೋ ರಕ್ಷನಬಗೆಗೆ "ಸಾಕುಸಾಕಿನ್ನೆಲ್ಲಿತನಕವಿ। ವೇಕತನದಾಳಾಪವೆಮಗಿನ್ನೇ ಕೆ ನಿಂಮಯ ಮಹಿಮೆಯನು ನೋಡುವಡೆ ಎನ್ನಳವೆ। ಕಾಕುತನಗಳು ಹೋಗಲೆನಗೆನಿ। ರಾಕುಳಶ್ರೀಲಿಂಗಸಂಗದ। ಜೋಕೆಯನು ಕೃಪೆಮಾ ಡಬೇಹುದು ಪ್ರಭುವೆಕೇಳೆಂದ॥ ಗುರುನೆತಾನೆಂಬಂತೆ ಶಿಷ್ಯನು। ಗುರು ವಚನ್ನಾಗಿರೆ ಪರೀಕ್ಷಿಸಿ। ಗುರುಪದವ ಬಳಿಕಿತ್ತು ಶಿಷ್ಯತ್ವವನು ತಾಹಿ ಡಿದು॥ ಗುರುಕುಮಾರಕನಹಸುಧಿಟವಾ। ಪರಿಯಲೆನ್ನನು ಪರಿಕಿಸಿದೆ ಸತ್ಪುರುಷನಹುದೈ ನೀನೆಧಿಟಗೋರಕ್ಷಕೇಳೆಂದ॥ ಶಿಕ್ಷಿಸಿವನೀಪರಿಯ ಲಾಗೋ। ರಕ್ಷನಲಿಸಾಧಕತನಂಗಳ। ಲಕ್ಷಪರಿಯಲಿಬಳಿಕಲಾತನ ನೋ ಡಿಕರುಣದಲಿ॥ ರಕ್ಷಿಸುವೆನೆಂದೆನುತಶೂನ್ಯದ। ಲಕ್ಷವನು ದೀಕ್ಷೆಯನು ಮಾಡಿದ। ಮೋಕ್ಷಮಾರ್ಗದಲಂದು ಗೊರಕ್ಷಂಗೆ ಪ್ರಭುರಾಯ" ಎಂದು ಶ್ರೀಪ್ರಭುವು ದೀಕ್ಷೆಗೆಯ್ದುದು ಕಂಡುಬರುತ್ತದೆ. ವಿರಕ್ತರಿಗೆ ರೂಢಿ ಯಲ್ಲಿ ದೀಕ್ಷಾಧಿಕಾರವು ಕಂಡುಬರುವುದಿಲ್ಲ ಆಗಮಗಳಲ್ಲಿಯೂ ವಿರಕ್ತ ರು ದೀಕ್ಷೆಮಾಡಬಾರದೆಂದು ಹೇಳಿದೆಯೆಂದು ಹಲವರೆನ್ನುವರು ಶ್ರೀ ಪ್ರ ಭುವುದೀಕ್ಷೆಯನ್ನೇಕೆ ಮಾಡಿದನು?

CC-0. Jangamwadi Math Collection. Digitized by eGangotri

## ವಿರಕ್ತನೂ ದೀಕ್ಷೆಯೂ.

ವಿರಕ್ತನೂ ದೀಕ್ಷೆಯೂ—ಸ್ಥೂಲ ದೃಷ್ಟಿಗೆ ಈ ಸಂದೇಹವು ಜನಿಸಾಗಿದೆ. ಮತ್ತು ಶಾಸ್ತ್ರದ ಯಥಾರ್ಥನಿಶ್ಚಯದ ಫಲದಿಂದ ಈ ವಿಷಯವು ವಿಚಾರಾರ್ಹವಾಗಿದೆ.

ವಿರಕ್ತನೆಂದರೆ ಜಂಗಮತತ್ತ್ವವು, ವಿರಕ್ತ, ಜಂಗಮ, ಅತಿಥಿ ಇತ್ಯಾದಿ ಶಬ್ದಗಳು ಸಮಾನಾರ್ಥಗಳಾಗಿವೆ. ಗುರುಲಿಂಗ ಜಂಗಮಗಳು ಒಂದೆ ಪರವಸ್ತುವಾಗಿವೆ. "ಶಿವಏವಶ್ರೀಗುರುಲಿಂಗ ಜಂಗಮಾತ್ಮಕ ಇತಿ ನಿಷ್ಠಾವಾನೇವ ಮಾಹೇಶ್ವರಃ" ಶಿವನೊಬ್ಬನೆ ಶ್ರೀ ಗುರುಲಿಂಗಜಂಗಮಸ್ವರೂಪನೆಂಬ ನಿಷ್ಠೆಯುಳ್ಳಾತನೆ ಮಾಹೇಶ್ವರನು—ವೀರಶೈವ ಧರ್ಮ ಶಿರೋಮಣಿ "ಏಕ ಏವಶಿವಃಸಾಕ್ಷಾತ್ಸರ್ವಾನು ಗ್ರಾಹಕಪ್ರಭುಃ। ಗುರುಜಂಗಮಲಿಂಗಾತ್ಮಾ ವರ್ತತೇಭುಕ್ತಿ ಮುಕ್ತಿದಃ"ಶಿವಏವ ಗುರುರ್ಲಿಂಗ ಜಂಗಮಾತ್ಮಕ ಇತ್ಯಸೌ ॥ ನಿಷ್ಠಾಯತ್ರಾಸ್ತಿ ಮಹತೀ ಸಏವತು ಮಹೇಶ್ವರಃ" ಸಿದ್ಧಾಂತ ಶಿಖಾಮಣಿ.

ದೀಕ್ಷೆಯೆಂದರೆ ಗುರುವು ಶಿಷ್ಯನಿಗೆ ಲಿಂಗವನನುಗ್ರಹಿಸುವುದು ಅದಕ್ಕೆ ಗುರುಲಿಂಗ ಜಂಗಮವೆಂಬ ಮೂರು ತತ್ತ್ವಗಳು ಆವಶ್ಯಕವಾಗಿವೆ. ನೋಡುಃ—"ಲಿಂಗಂ ಹಸ್ತೇಗೃಹೀತ್ವಾಥ ಭಾವದೃಷ್ಟ್ಯಾಚದೇಶಿಕಃ ಸಂಸ್ಥಾಪ್ಯಲಿಂಗಂ ಶಿಷ್ಯಸ್ಯಮಸ್ತಕಸ್ಥಾಂಕಲಾಂ ಪರಾಂ ॥ ತಲ್ಲಿಂಗಂ ಸ್ಥಾಪಯಿತ್ವಾಥ ಚರಪಾದೋದಕೇನಚ । ನಿವೇದ್ಯ ತತ್ಪ್ರಸಾದಂಚ। ಪ್ರಾಪ್ಯಾನುಜ್ಞಾಂ ಶಿವಾತ್ಮನಾಂ ॥ ಲಿಂಗೇಪ್ರಾಣಾನ್ ಪ್ರಣಿಕ್ಷಿಪ್ಯ । ಪ್ರಾಣೇ ಲಿಂಗಂ ತಥೈವಚ । ತಲ್ಲಿಂಗಂ ಸ್ಥಾಪಯೇಚ್ಛೀ ಷ್ಯೇಸಮ್ಯಗ್ಧ್ಯಾತ್ವೈಕಭಾವತಃ ॥ ಧ್ಯಾತ್ರೇಶಿಷ್ಯಾಯತಲ್ಲಿಂಗಂ ಧಾರಯಿತ್ವಾ ನಿರೂಪಯೇತ್ । ವೀರಮಾಹೇಶ್ವರಾಚಾರನಿಷ್ಠಾಮುಪರದುರ್ಲಭಾಂ ॥ ದತ್ತಂಲಿಂಗಮಿದಂ ವತ್ಸ" ಇತ್ಯಾದಿ ಲಿಂಗಕ್ಕೆ ತಕ್ಕ ಸಂಸ್ಕಾರಗಳನ್ನು ಮಾಡಿ ಅದನ್ನು ಕರದಲ್ಲಿರಿಸಿ ಶಿಷ್ಯನ ಮಸ್ತಕಸ್ಥವಾದಕಲೆಯನ್ನು ಸಂಗಳಿಸಿ ಜಂಗಮಪಾದೋದಕದಿಂದ ಭೀಷೇಕಿಸಿ ಜಂಗಮಪ್ರಸಾದವನ್ನು ನಿವೇದಿಸಿ ಶಿವಾತ್ಮನಾದ ಜಂಗಮನ ಅನುಜ್ಞೆಯನ್ನು ಹೊಂದಿ ಶಿಷ್ಯನ ಜೀವ ಕಲೆಯನ್ನು ಲಿಂಗದಲ್ಲಿಯೂ ಲಿಂಗದ ಶಿವಕಲೆಯನ್ನು ಶಿಷ್ಯನ ಪ್ರಾಣದಲ್ಲಿ ಅಂದರೆ ಜೀವಕಲೆಯಲ್ಲಿಯೂ ಸಮರಸೀಕರಿಸಿ ಲಿಂಗವನ್ನು ಶಿಷ್ಯನಿಗೆ ಧರಿಸಿ ಪರಮದುರ್ಲಭವಾದ ವೀರಶೈವಾಚಾರನನ್ನು ಬೋಧಿಸಬೇಕು. ಇತ್ಯಾದಿ

CC-0. Jangamwadi Math Collection. Digitized by eGangotri

ಅಂದಬಳಿಕ ದೀಕ್ಷೆಯಲ್ಲಿ ಜಂಗಮ ಶಬ್ದ ವಾಚ್ಯನಾದ ವಿರಕ್ತನು ಬೇಕೇ ಬೇಕು. ಲೋಕರೂಢಿಯು ಅಜ್ಞಾನ ಮೂಲವು. ಶಿವಾಗಮಗಳಲ್ಲಿ ದೀಕ್ಷಾಕಾರ್ಯದಲ್ಲಿ ಜಂಗಮವು ಮೇಲೆ ಹೇಳಿದ ರೀತಿಯಿಂದ ಬೇಕೆಂದು ಯಲ್ಲದೆ ಬೇಡೆಂದು ಇಲ್ಲ. ಈ ಆಗಮವಚನಾನುರೋಧದಿಂದ ಸಿದ್ಧಾಂತ ಶಿಖಾಮಣಿಯ “ ಸರ್ವಲಕ್ಷಣ ಸಂಪನ್ನೇ ತಸ್ಮಿನ್ ಲಿಂಗೇ ವಿಶೋಧಿತೇ। ಪೀಠಸ್ಥಿತೇ ಭಿಷಿಕ್ತೇ ಚ ಗಂಧಪುಷ್ಪಾದಿಪೂಜಿತೇ”॥ “ಎಂಬ ಶ್ಲೋಕದಲ್ಲಿ ಅಭಿಷಿಕ್ತೇ” ಎಂಬ ಪದಕ್ಕೆ ಪಂಚಾಮೃತಗಳಿಂದಲೂ ತದನಂತರ ಜಂಗಮ ಪಾದವಾರಿಯಿಂದಲೂ ಅಭಿಷಿಕ್ತವಾದ ಎಂಬರ್ಥವನ್ನು ಮಾಡಬೇಕು.

ಇದಲ್ಲದೆ ಸರ್ವದೀಕ್ಷಾವಿಧಿಗಳಲ್ಲಿಯೂ ಶಿಷ್ಯನ ಪ್ರಾಣದಲ್ಲಿ ಲಿಂಗ ಕಲೆಯನ್ನೂ ಲಿಂಗದಲ್ಲಿ ಶಿಷ್ಯನ ಪ್ರಾಣಕಲೆಯನ್ನೂ ಸಮರೀಕರಿಸ ಬೇಕೆಂದು ಹೇಳಿಗುವುದರಿಂದಲು ದೀಕ್ಷೆಯಲ್ಲಿ ಜಂಗಮಸಾನ್ನಿಧ್ಯವು ಅವಶ್ಯ ಕವಾಗಿದೆ. ಪ್ರಾಣ ಶಬ್ದಕ್ಕೆ ಶುದ್ಧವಾದ ಜಂಗಮ ತತ್ತ್ವವೆಂದು ಅರ್ಥವ ಮಾಡಬೇಕಲ್ಲದೆ ಅಶುದ್ಧವಾದ ಪಂಚಪ್ರಾಣವೆಂದು ಅರ್ಥವನ್ನು ಮಾಡ ಲಾಗದು. ಶಿಲಾದಿದೋಷವನ್ನು ನಿವೃತ್ತಿಗೊಳಿಸಿ ಶುದ್ಧವಾದ ಲಿಂಗದ ಲ್ಲಿ ಹಸಿವೆತೃಷೆಗಳಿಗಾಸ್ಪದವಾದ ಅಶುದ್ಧ ಪ್ರಾಣವನ್ನು ಸಂಚಿಸುವುದು ಅನರ್ಥಕರವು. ಆದುದರಿಂದ “ ಅಂಗಂಲಿಂಗಮಿತಿ ಪ್ರಾಹು; ಪ್ರಾಣೋ ಜಂಗಮ ಉಚ್ಯತೇ। ಅಮಿತಿಬ್ರಹ್ಮಸನ್ಮಾತ್ರಂ ಗಚ್ಛತೀತಿ ಗಮುಚ್ಯತೇ ” ಎಂದು ವೀರಶೈವ ಧರ್ಮ ಶಿರೋಮಣಿಯಲ್ಲುದಾಹರಿಸಿದ ಆಗಮ ಪ್ರಮಾ ಣದಿಂದ ಪ್ರಾಣಶಬ್ದಲಕ್ಷಿತವಾದ ಜೀವ ವ್ಯಾಪಾರಗಳ ಹೇತುವಾದ ಶಿವ ಚೈತನ್ಯವೆ ಪ್ರಾಣವು. ಅಂತಹ ಪ್ರಾಣವೆ ಜಂಗಮವು.

ಅಂದಬಳಿಕ ಲಿಂಗದಲ್ಲಿ ಜೀವಕಲೆಯನ್ನೂ ಜೀವದಲ್ಲಿ ಲಿಂಗಕಲೆಯ ನ್ನು ಕೂಡಿಸಬೇಕೆಂಬುದರರ್ಥವು:-ಶಿಷ್ಯನ ದೇಹವು ಭೂತದೇಹವಾಗಿತ್ತು. ಭೂತದೇಹವಾಗಿ ಜಾತಿವರ್ಣಾದಿಗಳಿಂದ ಕೂಡಿತ್ತು. ಆ ದೇಹಕ್ಕೆ ಗುರುವು ದೀಕ್ಷಾಕಾಲದಲ್ಲಿ ವಿಭೂತಿಧಾರಣ, ರುದ್ರಾಕ್ಷಧಾರಣ,ಪಂಚಕಲಶಾಭಿಷೇಕ ಇವೆಲ್ಲವನ್ನು ವಿರಚಿಸಿ ಆನಂತರ, ಅಕಾರಾದಿಕ್ಷಕಾರಾಂತವಾದ ಮಾತೃಕಾ ನ್ಯಾಸವನ್ನೂ ( ಅಕಾರವೆ ಶಿರಸ್ಸು ಆಕಾರವೆ ಹಣೆ ಇ ಈ ಕಣ್ಣುಗಳು ಉ ಊ ಕಿವಿಗಳು ಋ ೠ ಗಲ್ಲಗಳು: ಐ ಐ ನಾಸಾ ಪುಟಗಳು ಏ ಐ ತುಟಿಗಳು ಒ ಔ ದಂತಪಂಕ್ತಿಗಳು ಅಂ ಅಃ ಒಸಡುಗಳು ಕವರ್ಗವೆ ಬಲಗೈಯ ಭುಜಾ ದಿ ಹಸ್ತಾಂತವು. ಚವರ್ಗವೆ ಎಡಗೈ ಭುಜಾದಿ ಹಸ್ತಾಂತವು.

CC-0. Jangamwadi Math Collection. Digitized by eGangotri

ಟವರ್ಗವೆ ಬಲಗಾಲ ನಡುವಿಂದ ಪಾದಾಂತವು ತವರ್ಗವೆ ಎಡಗಾಲ ನಡುವಿಂದ ಪಾದಾಂತವು. ಪಕಾರವೆನಾಭಿ ಫ ಬ ಗಳೆ ದಕ್ಷಿಣವಾಮಪಾರ್ಶ್ವ ಗಳು ಭಕಾರವೆ ಕಂಠಸ್ಥಾನವು ಮಕಾರವೆ ಹೃದಯವು ಯ ರ ಲ ವ ಶ ಷ ಸ ಗಳೆ ತ್ವಗಾದಿ ಸಪ್ತಧಾತುಗಳು ಹಕಾರವೆ ಆತ್ಮನು ಕ್ಷಕಾರವೆ ಪಾಪಕ್ಷಯು) ಭುವನ ತತ್ತ್ವಕಲಾರೂಪವಾದ ಮೂರು ಅರ್ಥಾರ್ಥ್ವಗಳನ್ನೂ ಮಂತ್ರಪದವ ರ್ಣಗಳೆಂಬ ಮೂರು ಶಬ್ದಾರ್ಥ್ವಗಳನ್ನೂ, ನಿವೃತ್ಯಾದಿಗಳನ್ನೂ, ಷಡಕ್ಷರಾದಿ ಮಂತ್ರಗಳನ್ನೂ ನ್ಯಾಸವಮಾಡಲು ಅದು ಶಿವಕ್ರಿಯೆಗೆ ಯೋಗ್ಯವಾಗಿ ಲಿಂಗ ತನುವೆನಿಸಿತು ಅದಕ್ಕೆ ಇಷ್ಟಲಿಂಗ ಸಂಬಂಧವನ್ನು ಮಾಡಿತು ಆದರೆ ಇಷ್ಟಲಿಂಗಕ್ಕೆ ಮಂತ್ರವೆ ಪ್ರಾಣವಾಗಿದೆ ಆದುದರಿಂದ ಶಿಷ್ಯನ ಪ್ರಾಣದಲ್ಲಿ ರುವ ದೋಷವನ್ನು ದೂರೀಕರಿಸಿ ಆ ಪ್ರಾಣಶಕ್ತಿಯ ಮರೆಯಲ್ಲಿರುವ "ನಪ್ರಾಣೇನ ನಾಪಾನೇನ ಮರ್ತ್ಯೋಜೀವತಿ ಕಶ್ಚನ ಇತರೇಣತು ಜೀವಂತಿ ಯಸ್ಮಿನ್ನೇ ತೌಸಮಾ ಶ್ರೀ ತೌ" ಎಂಬ ಉಪನಿಷತ್ತಿನಿಂದ ಪ್ರಾಣಾಪಾನ ವಾಯುಗಳ ವ್ಯಾಪಾರಕ್ಕೆ ಕಾರಣವಾದ ಈಶ್ವರ ಚೈತನ್ಯದಲ್ಲಿ ಮಂತ್ರರೂಪ ವನ್ನು ಮೇಳಯಿಸಿ ಆ ಪ್ರಾಣವನ್ನು ಲಿಂಗದಲ್ಲಿ ಸೇರಿಸಬೇಕೆಂಬರ್ಥವು.

ಹೀಗೆ ಲಿಂಗಜಂಗಮರು ಗುರುವಿನಿಂದ ಬೋಧಿಸಲ್ಪಡುವುದರಿಂದ ಅಂತರಂಗದ ಜಂಗಮಕ್ಕೆ ನಿದರ್ಶನವಾದ ಶಿವಯೋಗಿ ಜಂಗಮವು ಅವಶ್ಯ ವಾಗಿಯೆ ಬೇಕು. ಆತನ ಆನುಜ್ಞೆಯನ್ನು ಹೊಂದಿಯೆ ಗುರುವು ದೀಕ್ಷೆ ಯನ್ನು ಮಾಡುವನು.

ಒಂದು ವೇಳೆ ದೀಕ್ಷಾಕಾಲದಲ್ಲಿ ಜಂಗಮವು ಸಿಗದಿದ್ದರೆ ಗುರು ವಿಗೂ ಜಂಗಮಕ್ಕೂ ಇರುವ ಏಕತ್ವದಿಂದ ದೀಕ್ಷೆಗೆ ಚ್ಯುತಿ ಇಲ್ಲ. ಆದರೆ ಜಂಗಮವು ಬರಬಾರದೆಂಬ ಬುದ್ಧಿಯಿಂದ ಕರೆಯದವನುನರನಲ್ಲದೆ ಹರನ ಲ್ಲ. ಅವನಿಗೆ ದೀಕ್ಷಾಕರ್ತೃತ್ವದಲ್ಲಿ ಅಧಿಕಾರವೆ ಇಲ್ಲ.

ಹಾಗಲ್ಲದೆ ಲಿಂಗದಲ್ಲಿ ಪೀಠವೆ ಬಿಂದುವೆಂಬ ಗುರುಸ್ಥಾನವಾಗಿಯು, ಪಿಂಡವೆ ನಾದವೆಂಬಲಿಂಗಸ್ಥಾನವಾಗಿಯು ಗೋಮುಖವೆ ಕಲೆ ಎಂಬ ಜಂಗಮಸ್ಥಾನವಾಗಿಯು ಹೇಳಲ್ಪಡುತ್ತದೆ ಅದರಿಂದಲು ದೀಕ್ಷಾಕಾಲದಲ್ಲಿ ಲಿಂಗದ ಸರ್ವಸಂಪತ್ತಿಗೆ ಜಂಗಮವು ಬೇಕೇ ಬೇಕು.

ಅಲ್ಲಮನು ಗುರುಜಂಗಮಕಾರ್ಯಗಳನ್ನೊಬ್ಬನೆ ಮಾಡಿದನು.

ಇರಲಿ ಇಷ್ಟರಿಂದ ಜಂಗಮವು ದೀಕ್ಷೆಗೆ ಆವಶ್ಯಕವೆಂತಾಯ್ತು. ಆದ ರೆ ಜಂಗಮವು ದೀಕ್ಷಾಕರ್ತೃವಾಗಲಿಲ್ಲ. ಇದಕ್ಕೇನು ಸಮಾಧಾನ? ಕೇ

CC-0. Jangamwadi Math Collection. Digitized by eGangotri

೪೮—ವೀರಶೈವನ ಪ್ರತಿಯೊಂದು ಕಾರ್ಯದಲ್ಲಿಯೂ ಗುರುಲಿಂಗಜಂಗಮದ ಸಾನ್ನಿಧ್ಯವಿರಬೇಕು. ತಪ್ಪಬಾರದು. ಆದರೆ ಗುರುಜಂಗಮರಲ್ಲಿ ಒಂದು ಒದಗದಿದ್ದರೆ ಮತ್ತೊಂದರಲ್ಲಿಯೂ, ಲಿಂಗಧಾರಣಾನಂತರದಲ್ಲಿ ಗುರು ಜಂಗಮುಗಳೊದಗದಿದ್ದರೆ ಅದರಲ್ಲಿ ಆವೆರಡೂ ಸಮಾವೇಶವಾಗುತ್ತವೆ. ಈ ಅರ್ಥದಲ್ಲಿ ಕ್ರಿಯಾಸಾರೋದಾಹೃತ ವಾಕ್ಯಗಳು ಪ್ರಮಾಣವಾಗಿವೆ. ನೋಡು:—ತ್ರಿಪಾದೂರ್ಧ್ವ ಉದೈನ್ಮಂತ್ರ ಅಸ್ಮಿನ್ನರ್ಥೇ ಪ್ರವರ್ತತೇ । ತ್ರಿಪಾದಿತಿ ತ್ರಯಃಪಾದಾಯಸ್ಯ ಸ ಸ್ಯಾತ್ರಿಪಾಚ್ಛಿವಃ । ಗುರುರ್ಲಿಂಗಂಜಂಗಮಂ ಚ ತೇಷಾಂಪಾದತ್ರಯ ಸ್ತ್ರಿಪಾತ್ ॥ ಊರ್ಧ್ವ ಉತ್ಕೃಷ್ಟ ಏವಾಸಾವುದೈದುದಿತವಾಞ್ಛಿವಃ । ಪುರುಷೋವೈರುದ್ರ ಇತಿ ಪುರುಷತ್ವಂಶಿವಸ್ಯ ತತ್ । ಪಾದೋಽಸ್ಯೆಹಶಿವಸ್ಯೈವ ಲಬ್ಧೋಽಯದ್ಯಭವತ್ಪುನಃ । ಪುನಃಶಬ್ದೋಽವಿಶೇಷಾರ್ಥವಾಚೀನ್ಯೈಶೇಽಸ್ಯಮತ್ರಚ । ಅಸಾನ್ನಿಧ್ಯಂ ಜಂಗಮಸ್ಯ ಗುರೋಽಶ್ಚಾಪಿ ತತಸ್ತಥಾ। ವಿಷ್ವಙ್ವ್ಯಕ್ರಾಮದಿತ್ಯೈವಂವ್ಯಾಪಕತ್ವಂ ಶಿವಸ್ಯಚ। ಅನುಸಂಧಾಯ ಮನಸಾಗುರುಜಂಗಮತಾಮಪಿ ॥ ಉಪದೇಶ ೩೮.

## ವಿಚಾರ.

ಗುರುಲಿಂಗ ಜಂಗಮುಕ್ಕನರ್ಪಿತ ಪದಾರ್ಥವನ್ನು ಸೇವಿಸುವನು ಭ್ರಷ್ಟನಾಗುತ್ತಾನೆ ಎಂಬರ್ಥದ "ಅಸಮರ್ಪ್ಯ ಪ್ರಾಣಲಿಂಗೇ ಜಂಗಮೇಽಚ ಗುರೌತಥಾ । ಸ್ವೀಕುರ್ಯಾದ್ಯದಿ ಮೋಹೇನ ಸಮವಾಯೇಽಪಿಯೋಜನಃ । ಸ್ವಾಚಾರಸಂಪರಿಭ್ರಷ್ಟಃ ಶೈವಶ್ಚ್ಯವತಿ ತತ್‌ಕ್ಷಣಾತ್"—ಇತ್ಯಾದಿ ಪ್ರಮಾಣಗಳಿಗೆ ವೇದದಲ್ಲಿ ಆಧಾರವಿಲ್ಲೆನಬೇಡ. "ತ್ರಿಪಾದೂರ್ಧ್ವ ಇತ್ಯಾದಿ ಮಂತ್ರವು ಈ ಅರ್ಥವಲ್ಲಿ ಪ್ರಮಾಣವಾಗಿದೆ. ಇದರಲ್ಲಿ ಪುರುಷ ಶಬ್ದವು ಶಿವವಾಚಕವಾಗಿದೆ. "ಪುರುಷೋ ವೈ ರುದ್ರಃ" ಎಂಶ್ರುತಿಯು ಪುರುಷ ಶಬ್ದವು ಶಿವವಾಚಕವೆಂಬಲ್ಲಿ ಪ್ರಮಾಣವಾಗಿದೆ. ಗುರುಲಿಂಗಚರರೂಪನಾದ ಪುರುಷನು ಆ ಗುರುಲಿಂಗಜಂಗಮವೆಂಬ ಪಾದಗಳಿಂಬ ಮೂರುಪಾದಗಳುಳ್ಳಾತನಹನು. ಗುರುಲಿಂಗಜಂಗಮುಗಳಿಲ್ಲದೆ ಲಿಂಗವೆಂಬ ಶಿವನಪಾದವು ದೊರೆಕಿದರೆ ಲಿಂಗವು ಗುರುಜಂಗಮಾತ್ಮಕವೆಂಬುದನ್ನು ಮನದಲ್ಲಿ ಅನುಸಂಧಾನವನ್ನು ಮಾಡಿ ಲಿಂಗ ಚರಣ ಪಾದೋದಕವ ಸ್ವೀಕರಿಸಿ ಭುಂಜಿಸಬೇಕು.—ಎಂಬುದೀಮಂತ ತಾತ್ಪರ್ಯವು.

ಹೀಗೆ ಮಂತ್ರಾರ್ಥವನ್ನು ಮಾಡಿ ಈ ಮಂತ್ರವು ಪಾದೋದಕ ಧಾರಣ ಪರವಾಗಿದೆಯಲ್ಲದೆ ಗ್ರಹಣಪರವಲ್ಲ ಅಂದರೆ ಪಾದೋದಕ ಸೇವನಪರವಲ್ಲ ಎಂಬ ಸಂಶಯವನ್ನು ಖಂಡಿಸುವೆನು:—

CC-0. Jangamwadi Math Collection. Digitized by eGangotri

ತ್ರಿಪಾದೂರ್ಧ್ವ ಉದೈತ್ಪುರುಷಃ । ಪಾದೋಸ್ಯೇಹಾಭವತ್ಪುನಃ ತತೋವಿಷ್ವಙ್ವ್ಯಕ್ರಾಮತ್ । ಸಾಶನಾನಶನೇ ಅಭಿ॥ ಎಂಬುದೈಸೆ ಮಂತ್ರವು !—ಪುರುಷಶಬ್ದವಾಚ್ಯನಾದ ಶಿವನು ಗುರುಲಿಂಗ ಜಂಗಮವೆಂಬ ಮೂರು ಪಾದಂಗಳಿಂದಿಹನು. ಆ ಮೂರು ಪಾದಂಗಳಲ್ಲಿ ಗುರುಜಂಗಮಗಳೆಂಬವೆರಡು ಪಾದಗಳಲ್ಲದೆ ಲಿಂಗವೆಂಬುದೊಂದೆ ಪಾದವು ಸನ್ನಿಹಿತವಿರಲು—ಶಿವನ ಪ್ರತಿಯೊಂದು ಪಾದವು ಇನ್ನುಳಿದ ಎರಡು ಪಾದಗಳನ್ನು ತುಂಬಿರುವುದರಿಂದ, ಅಂದರೆ ಗುರುವು ಲಿಂಗಜಂಗಮಾತ್ಮಕವಾಗಿಯೂ, ಲಿಂಗವು ಗುರುಜಂಗಮಾತ್ಮಕವಾಗಿಯೂ, ಜಂಗಮವು ಗುರುಲಿಂಗಾತ್ಮಕವಾಗಿಯೂ ಇರುವುವಾಗಿ ಲಿಂಗದಲ್ಲಿಯೆ ಗುರುಜಂಗಮಗಳಿರುವುದರಿಂದ ಅದರಲ್ಲಿಯೆ ಗುರುಜಂಗಮ ಪದೋದಕಗಳನ್ನು ಪಡೆದುಕೊಳ್ಳತಕ್ಕುದು. ತದನಂತರ ಭೋಜನಂಗೆಯ್ಯಬೇಹುದು. ಹಾಗಲ್ಲದೆ ಭೋಜನವಸ್ವೀಕರಿಸಲಾಗದು.

ಗುರುಲಿಂಗಜಂಗಮವೆಂಬ ಶಿವನ ಮೂರು ಪಾದಗಳನ್ನು ಹೇಳಿ ಆಪಾದಗಳೆಲ್ಲ ಸನ್ನಿಹಿತವಿರಲಿ ಆವುಗಳಲ್ಲಿ ಒಂದಾದ ಲಿಂಗವೊಂದೆ ಸನ್ನಿಹಿತವಿರಲಿ ಅದರಿಂದ ಪಾದೋದಕವನ್ನು ಪಡೆದು ಭುಂಜಿಸಬೇಕೆಂದು ಹೇಳಿರುವುದರಿಂದ ಭೋಜನಸಂಬಂಧವಾಗಿಯೆ ಪಾದೋದಕ ಸ್ವೀಕೃತಿಯನ್ನು ಹೇಳಿದಂತಾಯ್ತು. ಆದುದರಿಂದ ಪಾದೋದಕವು ಸೇವಿಸತಕ್ಕುದಲ್ಲದೆ ಕೇವಲ ಧರಿಸತಕ್ಕುದಲ್ಲ.

ಇಂತು ಪೂರ್ವಪಕ್ಷವಾದವನ್ನು ಖಂಡಿಸಿ ತನ್ನ ಸಿದ್ಧಾಂತಕ್ಕಾಗಿ ಉದಾಹರಿಸಿದ ಪ್ರಮಾಣಗಳಿವು " ಪ್ರಾಣಲಿಂಗಪರೋ ಭಕ್ತೋ ಲಬ್ಧ್ವಾ ತತ್ರಪದೋದಕಂ । ಗುರುಜಂಗಮಪಾದೋದಂ ಲಬ್ಧವಾನೇವ ಭಕ್ತಿತಃ। ಸಮವಾಯೇ ಗುರೋಸ್ತತ್ರಗುರೋರ್ಲಬ್ಧ್ವಾ ಪದೋದಕಂ। ಪಾದೋದಕಂ ಜಂಗಮಸ್ಯ ಲಬ್ಧವಾನ್ಮನಸೈವತತ್। ಗುರುಲಿಂಗಚರಾಣಾಂಚ ಸಮವಾಯೇತು ಭಕ್ತಿಮಾನ್।ಪಾದೋದಕಂ ಚರಾಲ್ಲಬ್ಧ್ವಾ ಗುರೋರ್ಲಿಂಗಸ್ಯ ಭಕ್ತಿಮಾನ್। ಅಶ್ನೀಯಾದಶನಂಭಕ್ತೋರನ್ಯಥಾನಶನಂ ಭವೇತ್ ॥ " ಪ್ರಾಣಲಿಂಗಪರನಾದ ಭಕ್ತನು ಗುರುಜಂಗಮರು ದೊರಕದಾಗ ಲಿಂಗಪಾದೋದಕವನ್ನು ಪಡೆದು ಆ ಲಿಂಗವು ಗುರುಲಿಂಗಜಂಗಮರೂಪವೆಂದರಿತು ಆ ಭಕ್ತಿಯಿಂದಲೆ ಗುರುಜಂಗಮ ಪಾದೋದಕಗಳು ದೊರೆತವೆಂದು ನಿಶ್ಚಯಿಸತಕ್ಕುದು. ಗುರುಲಿಂಗವೆಂಬೆರಡು ಇರಲು ಗುರುವಿನ ಪಾದೋದಕವನ್ನು ಪಡೆದುಗುರುಜಂಗಮಗಳೇಕತ್ವದಿಂದಲೆ ಜಂಗಮಪಾದೋದ

CC-0. Jangamwadi Math Collection. Digitized by eGangotri

ಕವನ್ನೂ ಪಡೆದನು. ಗುರುಲಿಂಗಜಂಗಮುಗಳೆಂಬ ಮೂರು ಪದಾರ್ಥಗಳು ಒದಗಿರಲು, ಜಂಗಮ ಪಾದೋದಕವನ್ನು ದೊರಕಿಸಿ ಆ ಜಂಗಮಪಾದೋದಕದಲ್ಲಿಯೆ ಗುರುಲಿಂಗಪಾದೋದಕಗಳನ್ನು ದೊರಕಿಸತಕ್ಕುದು. ಅಂದರೆ ಆ ಜಂಗಮ ಪಾದೋದಕವೆ ಗುರುಲಿಂಗಜಂಗಮ ಪಾದೋದಕವೆಂದು ತಿಳಿಯತಕ್ಕುದು. ಹೀಗೆ ತ್ರಿವಿಧ ಪಾದೋದಕವು ದೊರೆತಬಳಿಕ ಅದನ್ನು ಸೇವಿಸಿ ಪ್ರಸಾದಭೋಜನವನ್ನು ಮಾಡುವುದುಚಿತವು.

ಕಡೆಯಲ್ಲಿ ಉದಾಹರಿಸಿದ ಪ್ರಮಾಣಗಳಿಂದ ಜಂಗಮದಲ್ಲಿ ಗುರುವು ಸಮಾವೇಶವಾಗುವುದರಿಂದ ಅಲ್ಲಮನು ಗೋರಕ್ಷನಿಗೆ ದೀಕ್ಷೆಮಾಡಿದುದು ಯೋಗ್ಯವೆ.

## ಇನ್ನೊಂದು ಸಂಶಯವು.

ಈ ಪ್ರಮಾಣವನ್ನವಲಂಬಿಸಿ ಗುರುಜಂಗಮರೀರ್ವರು ಸನ್ನಿಹಿತರಿದ್ದಾಗ ಜಂಗಮದಲ್ಲಿಯೆ ದೀಕ್ಷಾಧಿಕಾರವು ಬರಬೇಕು. ಹಾಗಿಲ್ಲ ಸೂಕ್ಷ್ಮಾಗಮದಲ್ಲಿ "ಚರಾಲ್ಲಬ್ಧ್ವಾ ಪದೋದಕಂ" ಎಂದುಹೇಳಿದೆ ಅಲ್ಲದೆ ಜಂಗಮವೇ ದೀಕ್ಷಾಕರ್ತೃವೆಂದು ಹೇಳಲಿಲ್ಲ. ಆದುದರಿಂದ ಪಾದೋದಕದ ಸಂಪಾದನೆಯ ಮಟ್ಟಿಗೆ ಜಂಗಮದಲ್ಲಿ ಗುರುವು ಸಮಾವೇಶವಾಗಲಿ ದೀಕ್ಷೆಯಲ್ಲಿ ಜಂಗಮನಿಗೆ ಅಧಿಕಾರವಿರಲಾರದು. ಎಂಬ ಶಂಕೆಯು ಬರುತ್ತದೆ. ಇದಕ್ಕೇನು ಪರಾಭವವು? ಕೇಳು ಮೇಲೆ ಉದಾಹರಿಸಿದ ಪ್ರಮಾಣದಿಂದ ಜಂಗಮತತ್ತ್ವದಲ್ಲಿ ಗುರುಲಿಂಗ ತತ್ತ್ವಗಳು ಸಮಾವೇಶವಾಗುತ್ತವೆ. "ಪಾದತೀರ್ಥದ ವಿಷಯದಲ್ಲಿ ಸಮಾವೇಶವಾಗಲಿ ದೀಕ್ಷೆಯಲ್ಲಿ ಆಗಲಾರದೆಂದು ಹೇಳುವೆನಷ್ಟೇ? ಆದರೂ ಅದನ್ನೇ ಹೇಳುವೆಯಲ್ಲ?" ಪಾದೋದಕಕ್ಕೋಸ್ಕರವಾದರು ಸಮಾವೇಶವಾಗಬೇಕಾದರೆ ಜಂಗಮತತ್ತ್ವವು ಗುರುತತ್ತ್ವಕ್ಕೆ ಕಾರಣವಾಗಲ್ಲದೆ ಅದನ್ನು ಸಮಾವೇಶಮಾಡಿಕೊಳ್ಳಲಾರದು. ಆದುದರಿಂದ ಜಂಗಮತತ್ತ್ವವು ಗುರುತತ್ತ್ವಕ್ಕೆ ಕಾರಣಸ್ವರೂಪವು. "ಪರಮೇಶ್ವರನ ತ್ರಿವಿಧರೂಪವೆ ಗುರುಲಿಂಗಜಂಗಮವೆಂದು ಹೇಳಿ ಈಗ ಗುರುತತ್ತ್ವಕ್ಕೆ ಜಂಗಮತತ್ತ್ವವು ಕಾರಣವೆಂದು ವಿರೋಧ ವಚನವನ್ನು ಹೇಳುವೆಯಲ್ಲ?" ಅನಬೇಡ ಈ ಕಾರ್ಯಕಾರಣತ್ವವು ಹಾಲುಮೊಸರುಗಳಂತೆ ವಿಕಾರರೂಪವಲ್ಲ. ಅದರೆ ಉಪಾಧಿವಶದಿಂದ ಹೇಳತಕ್ಕುದು. ಹೇಗಂದರೆ:—

ಪರಮೇಶ್ವರನಿಗೆ ಈಶಾನತತ್ಪುರುಷ ಅಘೋರ ವಾಮದೇವಸದ್ಯೋಜಾತವೆಂದು ಐದು ಮುಖಗಳುಂಟು ಈ ಐದು ಮುಖಗಳು ಈಶನ ಅನು

CC-0. Jangamwadi Math Collection. Digitized by eGangotri

ಗ್ರಹ ತಿರೋಭಾವಸಂಹಾರ ಸ್ಥಿತಿ ಸೃಷ್ಟಿ ಎಂಬ ಪಂಚಕೃತ್ಯಗಳಿಗೆ ಕರ್ತೃ ವಾಗಿವೆ ನೋಡು: "ಸೃಷ್ಟಿಃಸ್ಥಿತಿಶ್ಚಸಂಹಾಪರಸ್ತಿರೋಭಾವೋಪ್ಯನುಗ್ರಹಃ। ಪಂಚೈವಮೇಜಗತ್ಕೃತ್ಯಂ ನಿತ್ಯಸಿದ್ಧಮಜಾಚ್ಯುತೌ ॥ ಪಂಚಕೃತ್ಯಮಿದಂ ವೋಢುಂಮಮಾಸ್ತಿವಖಪಂಚಕಂ । ಚತುರ್ದಿಕ್ಷುಚತರ್ವಕ್ತ್ರಂ ತನ್ಮಧ್ಯೇ ಪಂಚಮಂಮುಖಂ "ವಿದ್ಯೇಶ್ವರಸಂಹಿತಾ ಅ೧೦ಎಲ! ಬ್ರಹ್ಮವಿಷ್ಣುಗಳೆ ಸೃಷ್ಟಿಸ್ಥಿತಿಸಂಹಾರ ತೀರೊಭಾವ ಅನುಗ್ರಹ ವೆಂಬ ಐದು ಜಗತ್ಕೃತ್ಯವು ನನ್ನಲ್ಲಿ ನಿತ್ಯಸಿದ್ಧವಹುದು. ಈ ಐದು ಕೃತ್ಯಗಳನ್ನು ನಿರ್ವಹಿಸಲಿಕ್ಕೆನನಗೆ ಐದು ಮುಖಗಳಿಹವು. ಪೂರ್ವಾದಿ ನಾಲ್ಕುದಿಕ್ಕುಗಳಲ್ಲಿ ನಾಲ್ಕು ಮತ್ತು ಅವುಗಳ ಮಧ್ಯದಲ್ಲಿ ಐದನೆಯದು ಅಂದರೆ ಪಂಚವಕ್ತ್ರಾಣಿ ಶೃಣುಸಾಂಪ್ರತಂ। ಪಶ್ಚಿಮಾದಿ ಸಮಾರಭ್ಯ ಸದ್ಯೋಜಾತಾದ್ಯನು ಕ್ರಮಾತ್ । ಊರ್ಧ್ವಾಂತಮೀಶಾನಾಂತಂ ಚ ಮುಖಪಂಚಕಮೀರಿತಃ ॥ ಎಂಬ ಕೈಲಾಸಸಂಹಿತಾದಿ (ಅ೧೦) ವಚನಗಳಿಂದ ಸದ್ಯೋಜಾತಸೃಷ್ಟಿ ವಾಮದೇವ--ಸ್ಥಿತಿ ಅಘೋರ–ಲಯ ತತ್ಪುರುಷ–ತಿರೋಭಾವ ಈಶಾನ–ಅನುಗ್ರಹ–ಎಂಬೀ ವಿಧವಾಗಿ ಪಂಚಮುಖಗಳು ಪಂಚಕೃತ್ಯಪರವಾಗಿವೆ.–ಹಾಗು ಈ ಪಂಚ ಕೃತ್ಯಗಳನ್ನು (ಸ್ಥೂಲವಾಗಿ) ಸೃಷ್ಟಿಯಲ್ಲಿ ಪಂಚಭೂತಗಳಲ್ಲಿ ನಾವುಕಾಣುತ್ತಿರುವುದರಿಂದ ಆ ಪಂಚಭೂತಗಳಿಗೂ ಪಂಚಮುಖಗಳಿಗೂ ಅಭೇದವನ್ನು ಕಲ್ಪಿಸುವದುಂಟು. ನೋಡು :—ತದಿದಂ ಪಂಚಭೂತೇಷು ದೃಶ್ಯತೇ ಮಾಮಕೈರ್ಜನೈಃ । ಸೃಷ್ಟಿರ್ಭೂ ಮೌಸ್ಥಿತಿಸ್ತೋಯೇಸಂಹಾರಃ ಪಾವಕೇತಥಾ । ತಿರೋಭಾವೋನಿಲೆತದ್ವದನುಗ್ರಹ ಇಹಾಂಬರೇ॥ ಸೃಜ್ಯತೇ। ಧರಯಾಸರ್ವಮದ್ಭಿಃ ಸರ್ವಂ ಪ್ರವರ್ಧತೇ । ಅರ್ದ್ಯತೇತೇಜಸಾ ಸರ್ವಂ ವಾಯುನಾ ಚಾಪನೀಯತೇ ।ವ್ಯೋಮ್ನಾನು ಗೃಹ್ಯತೇಸರ್ವಂಜ್ಞೇಯಮೇವಂಹಿಸೂರಿಭಿಃ " ನನ್ನವರು ಈ ಪಂಚಕೃತ್ಯವನ್ನು ಪಂಚಭೂತಗಳಲ್ಲಿ ಕಾಣುವರು. ಸರ್ವವು (ವೃಕ್ಷಾದಿ, ಶರೀರಾದಿ) ಭೂಮಿಯಿಂದ ಹುಟ್ಟುತ್ತದೆ. ಅಪ್ಪುವಿನಿಂದ ಪಾಲಿತವಾಗುತ್ತದೆ. ವಹ್ನಿಯಿಂದ ಸಂಹರಿಸಲ್ಪಡುತ್ತದೆ. ವಾಯುವಿನಿಂದ ಅತ್ತಿತ್ತ ಸೆಳೆಯಲ್ಪಡುತ್ತದೆ. ಆಕಾಶದಿಂದ ಇಂಬುಗೊಟ್ಟು ಸಲಹಲ್ಪಡುತ್ತದೆ. ಈ ವಿಧವಾಗಿ ವಿದ್ವಾಂಸರು ತಿಳಿಯತಕ್ಕದು. *

---

*ಟೀಪು—ಶ್ರೀತೋಂಟದಾರ್ಯನು ಉದಾಹರಿಸಿದ ಪಂಚಾಶಿಕಾಶಾಸ್ತ್ರದಲ್ಲಿ ಸೃಷ್ಟ್ಯಾದಿ ಪಂಚಕೃತ್ಯಗಳು—ಅಗ್ನಿಯಲ್ಲಿ ಸೃಷ್ಟಿ ಅಪ್ಪುವಿನಲ್ಲಿ ಸ್ಥಿತಿ ಅಥವಾ ಪಾಲನ ವಾಯುವಿನಲ್ಲಿ ಸಂಹೃತಿ ಪೃಥ್ವಿಯಲ್ಲಿ ತಿರೋಭಾವ ಆಕಾಶದಲ್ಲಿ ಅನುಗ್ರಹವೆಂದು ಹೇಳಿಯುನೆ—ಭೂವನ್ಹಾಂ ಘಾನ್ನೂವತ್ತುಪಸಪರ್ಯಾಯುತಿರೋಧಾನ

CC-0. Jangamwadi Math Collection. Digitized by eGangotri

ಈ ಬಗೆಯಾಗಿ ಪರಮಾತ್ಮನ ಪಂಚಮುಖಗಳ ಕೃತ್ಯಗಳು ಪಂಚ ಭೂತಗಳಲ್ಲಿ ತೋರುವುವಾದುದರಿಂದ ಆಯಾ ಭೂತಗಳಿಗೆ ಆಯಾ ಮುಖ ಗಳನ್ನು ಸಂಬಂಧಿಸುವರು. ನೋಡು—ಓಂಕಾರೋಮಮದೇಹಃಸ್ಯಾನ್ನ ಕಾರಾದ್ಯಾಸ್ತ್ರಥೈವಚ । ಸದ್ಯಾದಿಪಂಚವಕ್ತ್ರಾಣಿ ಕ್ರಮಾದೇವಂವರಾನ ನೇ ॥ ಎಲೌ ಪಾರ್ವತಿ ಓಂಕಾರವು ನನ್ನ ದೇಹವು ನಕಾರಾದಿ ಐದು ವರ್ಣ ಗಳು ಸದ್ಯೋಜಾತಾದಿ ಈಶಾನಾಂತವಾದ ನನ್ನ ಐದು ಮುಖಗಳು—

ಈ ಐದು ವರ್ಣಗಳೆ ಭೂಮ್ಯಾದಿ ಭೂತಗಳ ಬೀಜಗಳೆಂತಲು ಹೇಳಿಯದೆ ನೋಡು "ಭೂಜಲಾಗ್ನಿಮರುದ್ವ್ಯೋಮ್ನಾಂಬೀಜಾನ್ಯೇ ತಾನಿಶೋಭನೆ॥" ಎಲೌ ಶೋಭಾವತಿಯೆ ಈ ನಕಾರಾದಿ ಬೀಜಾಕ್ಷ ರಗಳು ಕ್ರಮದಿಂದ ಪೃಥ್ವೀ, ಜಲ, ಅಗ್ನಿ, ವಾಯು, ಆಕಾಶ ಗಳ ಬೀಜಗಳು. ಆದುದರಿಂದ ಸದ್ಯೋಜಾತಮುಖಕ್ಕೂ ಪೃಥ್ವಿಗೂ, ವಾ ಮದೇವಕ್ಕೂ ಅಪ್ಪುವಿಗೂ, ಅಘೋರಕ್ಕೂ ವಹ್ನಿಗೂ, ತತ್ಪುರುಷಕ್ಕೂ ವಾಯುವಿಗೂ, ಈಶಾನಕ್ಕೂ ಆಕಾಶಕ್ಕೂ ತಾದಾತ್ಮ್ಯ ಸಂಬಂಧವು ಕಲ್ಪಿ ಸಲ್ಪಡುತ್ತದೆ. ಆಯಾಭೂತಗಳಲ್ಲನುಕ್ರಮದಿಂದಿರುವ ಸಕಲಾಧಾರತ್ವ, ಸರ್ವ ವೃದ್ಧಿಕರತ್ವ, ಸರ್ವಪ್ರಕಾಶತ್ವ, ಸರ್ವಮಹತ್ವ, ಸರ್ವಾವಕಾಶ ಪ್ರ ದತ್ವ ಎಂಬಿವುಗಳು ಶಿವಾಂಶವಾಗಿರುವುದರಿಂದ ಆ ಭೂತಗಳಿಗೂ ಸ ದ್ಯೋಜಾತಾದಿಗಳಿಗೂ ತಾದ್ಯಾತ್ಮ್ಯವನನ್ನ ಹೇಳಿತು. ಆಯಾ ಭೂ ತಗಳಲ್ಲಿಯ ಜಡ ಧರ್ಮಗಳು ಪ್ರಕೃತಿಯ ಗುಣಗಳಹುದರಿಂದ ಆ ಭೂತ ಗಳು ಶಿವನಲ್ಲವೆಂತಲೂ ಹೇಳಿತು. ಇದೀಗ ಶಿವಜಗನ್ಮಯತ್ವ ಮತ್ತು ಶಿವಜಗದನ್ಯತ್ವ (ಶಿವನು ಜಗದ್ರೂಪನು ಶಿವನು ಜಗದಿಂದನ್ಯನು) ಎಂಬ ಮಾಹೇಶ್ವರ ಸ್ಥಳಗಳಭಿಪ್ರಾಯವು

ಇರಲಿ ಈ ಪಂಚಭೂತಗಳ ತಾದಾತ್ಮ್ಯ ವಿಚಾರದಿಂದ ಸದ್ಯೋ ಜಾತವು ವಾಮದೇವದಲ್ಲಿಯೂ, ವಾಮದೇವವು ಅಘೋರದಲ್ಲಿಯೂ, ಅಘೋರವು ತತ್ಪುರಷದಲ್ಲಿಯೂ, ತತ್ಪುರುಷವು ಈಶಾನದಲ್ಲಿಯೂ ಈಶಾ

---

ಶಕ್ತಿಃ । ಜಲೇ ಪುಷ್ಟಿಲಕ್ಷಣಾ ಪಾಲನಶಕ್ತಿಃ । ವಾಯೌ ಶೋಷಕತಾಲಕ್ಷ ಣಾ ಸಂಹಾರ ಶಕ್ತಿಃ । ನಭಸಿ ವ್ಯಾಪಕಶಿವೈಕೀಕರಣಪ್ರವೀಣಾನುಗ್ರಹಾತ್ಮಿ ಕಾ ವಿಭುತಾಶಕ್ತಿಃ । ಉಕ್ತೋಯಮರ್ಥಃ ಪಂಚಾಶಿಕಾಶಾಸ್ತ್ರೇ—ಧೂಮಾ ವತೀ ಪೃಥಿವ್ಯಾಂ ಹ್ಲಾದಾಪ್ಸು ಶುಚೌ ತು ಭಾಸ್ವತೀ ಪ್ರಥತೇ ವಾಯೌ ಸ್ಪಂದಾ. ವಿಭ್ವೀ ನಭಸಿ । ವ್ಯಾಪ್ತಂ ಜಗತ್ತಾಭಿಃ—ಧೂಮಾವತೀ ತಿರೋಧೌ ಭಾಸ್ವತ್ಯೇವ ಭಾಸನೇ ಧ್ವಸಾಂ ಶಕ್ತಿಃ । ಕ್ಷೋಭೇ ಸ್ಪಂದಾ ವ್ಯಾಪ್ತೌ ವಿಭ್ವೀ ಹ್ಲಾ ದಾ ಚ ಪುಷ್ಟ್ಯಸ್ಯಾಂ ॥

CC-0. Jangamwadi Math Collection. Digitized by eGangotri

ನವು ಗೋಪ್ಯಾನನದಲ್ಲಿಯೂ ಲಯವನ್ನು ಹೊಂದುತ್ತವೆಂದು ಹೇಳುವರು. ಆದರೆ "ಸ್ಥಿರೈರಂಗೈಃ" ಎಂಬ ಮೊದಲಾದ ವೇದವಾಕ್ಯಗಳಿಂದ ಪರಶಿವ ಪಂಚಕೃತ್ಯವಿಧಾಯಕ ಸದ್ಯೋಜಾತಾದಿ ಬ್ರಹ್ಮಗಳು ನಿತ್ಯವಾಗಿವೆ. ಮತ್ತು ಪರಶಿವನ ನಿರ್ವಿಕಾರ ಸ್ವರೂಪದಲ್ಲಿ ಐಕ್ಯದಿಂದಿವೆ.

ಅದರಂತೆಯೆ ಅಂಗನನ್ನು ಶಿವಾಚಾರಮುಖನನ್ನಾಗಿ ಮಾಡುವ ಗುರುವು ಶಿಷ್ಯನ ಆಚಾರದಲ್ಲಿಯೂ, ಆಚಾರವು ಲಿಂಗಪೂಜಾಮಯವಾಗಿ ಲಿಂಗವಲ್ಲಿಯೂ, ಆ ಲಿಂಗವು ರೂಪದಿಂದ ನೇತ್ರದಲ್ಲಿಯೂ ಮಂತ್ರರೂಪದಿಂದ ಜಿಹ್ವೆಯಲ್ಲಿಯೂ, ಶಿವಶಬ್ದರೂಪದಿಂದ ಶ್ರವಣದಲ್ಲಿಯೂ, ಸ್ಪರ್ಶದಿಂದ ತ್ವಕ್ಕಿನಲ್ಲಿಯೂ ಏಕೀಭವಿಸಿ ಶಿವಾನುಭವರೂಪಜಂಗಮದಲ್ಲಿಯೂ ಲಯವಾಗುತ್ತಿರುವುದರಿಂದ ತನ್ನಲ್ಲಿ ಲೀನವಾದ ಗುರುವಿನ ಕಾರ್ಯವನ್ನು ಜಂಗಮರೂಪನಾದ ಅಲ್ಲಮನು ಮಾಡಿದುದು ವಿರುದ್ಧವಲ್ಲ. ಗುರುತತ್ತ್ವವು ಜಂಗಮ ತತ್ತ್ವದಲ್ಲಿ ಲಯವಾಗುವುದೆಂದರೆ ವಿಕಾರರೂಪವಲ್ಲ. ಒಂದೇ ವಸ್ತುವಿನ ಆಯಾ ಕಾರ್ಯಶಕ್ತಿಯ ವಶದಿಂದ ತೋರುವ ವೈಭವ ರೂಪವಾಗಿದೆ.

## ಸಸಂದರ್ಭ ಸಮಾಧಾನ.

ಮೇಲೆ ವಿವರಿಸಿದ ಶಂಕಾ ನಿರಸನ ಪ್ರಕಾರವು ನಂಮ ಸಂದರ್ಭಕ್ಕೆ ಅಂದರೆ ಮುಕ್ತಾಯಕ್ಕನಿಗೂ ಗೋರಕ್ಷಕನಿಗೂ ಮಾಡಿದ ಉಪದೇಶ ಸಂದರ್ಭಕ್ಕೆ ಆವಶ್ಯಕವಾದುದಲ್ಲ. ಜಂಗಮದ ದೀಕ್ಷಾಕಾರ್ಯವಿಷಯಕವಾದ ಸಂಶಯವು ಒದಗಿದಾಗಲೆ ಈ ವಿಷಯದ ಪೂರ್ಣವಿಚಾರವಾಗಲೆಂದು ಅದನ್ನು ಮಂಡಿಸಿತಲ್ಲದೆ, ಕಥಾಸಂದರ್ಭವು ಹಾಗಿಲ್ಲ. ಗೋರಕ್ಷಕನಿಗಾಗಲಿ, ಮುಕ್ತಾಯಕ್ಕಗಾಗಲಿ ಪ್ರಭುವು ಕ್ರಿಯಾ ದೀಕ್ಷೆಯನ್ನು ಮಾಡಿಲ್ಲ. ದೀಕ್ಷೆಯನ್ನು ಮಾಡಿದನೆಂಬುದರಿಂದ ಲಿಂಗಧಾರಣ ಮಾಡಿದನೆಂದು ಆಗದು. ವೀರಶೈವದಲ್ಲಿ ಕ್ರಿಯಾದೀಕ್ಷೆ, ಯೋಗದೀಕ್ಷೆ, ಜ್ಞಾನದೀಕ್ಷೆ, ವಿಜ್ಞಾನದೀಕ್ಷೆ, ಎಂಬ ನಾಲ್ಕು ದೀಕ್ಷೆಗಳುಂಟು. ನೋಡು:-"ಭಕ್ತಸ್ಥಲೇ ಕ್ರಿಯಾದೀಕ್ಷಾ, ಪ್ರಾಣಲಿಂಗಸ್ಥಲೇ ಪುನಃ।ಯೋಗದೀಕ್ಷಾ ಜ್ಞಾನದೀಕ್ಷಾ ಶರಣಸ್ಥಲಮಾಶ್ರಿತೇ। ಐಕ್ಯಸ್ಥಲೇತು ವಿಜ್ಞಾನ ದೀಕ್ಷಾಯತ್ರೋದಿತಾಗುಹ ತಸ್ಮಾತಂ ವೀರಶೈವಾಖ್ಯಮಾಹುರಾಗಮಪಾರಗಾಃ ॥ ವೀರಶೈವ ಧರ್ಮಶಿರೋಮಣಿಯಲ್ಲುದಾಹರಿಸಿದ ಯೋಗಜಾಗಮ ವಾಕ್ಯವು.

CC-0. Jangamwadi Math Collection. Digitized by eGangotri

## ಈ ಚತುರ್ದೀಕ್ಷಾ ವಿಚಾರವು.

ಕ್ರಿಯಾದೀಕ್ಷೆಯು ಭಕ್ತಸ್ಥಲದಲ್ಲಿ ಹೇಳಲ್ಪಟ್ಟಿದೆ. ಈ ದೀಕ್ಷೆಯಲ್ಲಿ ಇಷ್ಟಲಿಂಗ ಸಂಬಂಧವಾಗುತ್ತದೆ. ಇದರ ಕ್ರಮವನ್ನು ಸವಿಸ್ತರವಾಗಿ ಹೇಳುವುದರಲ್ಲಿ ಗುರುವು ಲಿಂಗ ಸಂಬಂಧವನ್ನು ಜಂಗಮ ಸಾಕ್ಷಿಕವಾಗಿ ಮಾಡತಕ್ಕುದೆಂದು "ಪ್ರಾಪ್ಯಾನುಜ್ಞಾಂ ಚರಸ್ಯಚ" ಎಂಬ ಸೂಕ್ಷ್ಮಾಗಮ ವಾಕ್ಯದಲ್ಲಿ ಹೇಳಿಯದೆ. ಚರಶಬ್ದವಾಚ್ಯನಾದ ಜಂಗಮಮೂರ್ತಿಯ ಅನುಮತಿಯನ್ನು ಹೊಂದಿ ಗುರುವು ಲಿಂಗಧಾರಣಮಾಡಬೇಕು ಎಂಬುದೀ ಪ್ರಮಾಣದ ಶಬ್ದಾರ್ಥವು ಇಷ್ಟ ಪ್ರಾಣಭಾವವೆಂಬ ಮೂರು ಲಿಂಗಗಳು ಒಂದೇ ಪರಮಾತ್ಮವಸ್ತುವಾಗಿರುವುದರಿಂದ ಒಂದನ್ನೊಂದು ಅಗಲಿಲ್ಲ. ಒಂದರೊಳಗೊಂದು ತೊಡಕಿವೆ ಎಂಬುದನ್ನು ಮರೆಯಲಾಗದು. ಆದುದರಿಂದ ಇಷ್ಟಲಿಂಗಗತವಾದ ಭಾವಲಿಂಗದ ಸಂಬಂಧವನ್ನು ಶ್ರೀಗುರುವು ಹಸ್ತ ಮಸ್ತಕ ಸಂಯೋಗದಿಂದಲು, ಇಷ್ಟಲಿಂಗ ಗತ ಪ್ರಾಣಲಿಂಗದ ಸಂಯೋಗವನ್ನು ಮಂತ್ರ ದೀಕ್ಷೆಯೆಂಬ ಶ್ರೀಷಡಕ್ಷರ ಮಂತ್ರಬೋಧೆಯಿಂದಲು, ಮಾಡಿ ಕ್ರಿಯಾದೀಕ್ಷೆಯನ್ನು ಮಂತ್ರಕಲಾದಿಗಳಿಂದ ಸಂಬಂಧಿಸಲ್ಪಟ್ಟ ಶಿವಲಿಂಗವನ್ನು ಶಿಷ್ಯನ ದೇಹಕ್ಕೆ ಹೊಂದಿಸುವುದರಿಂದ ಮಾಡುವನು.

ಕ್ರಿಯಾದೀಕ್ಷಾಸಂಪನ್ನನು ಭಕ್ತಮಹೇಶ್ವರನೆಂಬ ಸ್ಥಳಗಳನ್ನು ಕ್ರಮಿಸುವನು. 'ಇಷ್ಟಲಿಂಗ ಪ್ರಕೃತಿಕೇ ಆಚಾರ ಗುರುಲಿಂಗಕೇ ಪಾರ್ಥಿವಾಪ್ಯೇ ಇತಿ ಪ್ರೋಕ್ತೇಶೈವಾಗಮ ವಿಶಾರದೈ'ಃ—ಲಿಂಗಧಾರಣಚಂದ್ರಿಕೆಯಲ್ಲುದಾಹರಿಸಿದ ಸಿದ್ಧಾಂತಶೇಖರವಚನವು.—ಆಚಾರಲಿಂಗ ಗುರುಲಿಂಗಗಳು ಇಷ್ಟಲಿಂಗ ಪ್ರಕೃತಿಕಗಳು; ಇವೆರಡಕ್ಕು ಇಷ್ಟಲಿಂಗವೆ ಮೂಲವು. ಅಂದರೆ ಆಚಾರದಿಂದಲು ಗುರುದತ್ತ ಷಡಕ್ಷರ ಜಪದಿಂದಲು ಇಷ್ಟಲಿಂಗಸ್ಥಾಪನವಾಗುತ್ತದೆಂಬರ್ಥ. ಪಂಚಾಚಾರವೆ ಭೂಮಿಯು ಶಿಷ್ಯನ ಶಿವಾನುಸಂಧಾನವೆ ಬೀಜವು ಗುರುದತ್ತ ಮಂತ್ರಜಪವೆ ನೀರು. ಅದರಿಂದ ಪ್ರಕಟವಾದ ಇಷ್ಟಲಿಂಗದ ಸಾಕ್ಷಾತ್ಕಾರವೆ ಫಲವು.

ಹಾಗಾದರೆ ಮೇಲೆ ಇಷ್ಟಲಿಂಗವೆ ಆಚಾರಗುರುಲಿಂಗಗಳಿಗೆ ಮೂಲವೆಂದು ಹೇಳಿದರ್ಥವು ತಪ್ಪಾಯಿತ್ತು. (ಅರ್ಥವು ತಪ್ಪಿಲ್ಲ ಫಲದಲ್ಲಿ ಬೀಜವೂ ಆಬೀಜದಲ್ಲಿ ವೃಕ್ಷವೂ ಒಳಗಾಗಿರುವುವು. ಆದುದರಿಂದ ಫಲವು ವೃಕ್ಷಕ್ಕೆ ಕಾರಣವಾಗಿರುವಂತೆ ಇಷ್ಟಲಿಂಗವು ಆಚಾರಲಿಂಗ ಗುರುಲಿಂಗಗಳಿಗೆ ಕಾರಣವೆಂಬರ್ಥವು.)

CC-0. Jangamwadi Math Collection. Digitized by eGangotri

ಇಷ್ಟಲಿಂಗವೆಂಬ ಕಾರಣದಲ್ಲಿ ಕೋರಿ ಫಲದಿಂದ ತೋರಿದ ವೃಕ್ಷ ವು ತಾನು ಪುನಃ ಫಲಕ್ಕೆ ಕಾರಣವಾದಂತೆ ಶ್ರೀಗುರುವು ಇಷ್ಟಲಿಂಗಕ್ಕೆ ಕಾರ ಣನಾಗಿ ಶಿಷ್ಯನ ತನುವನ್ನು ಪಾವನ ಮಾಡಿದನು.

## ಯೋಗದೀಕ್ಷಾ.

ಪಾವನವಾದ ತನುವು ಇಂದ್ರಿಯಗಳನ್ನೂ ಪ್ರಾಣವನ್ನೂ ಪವಿತ್ರೀಕ ರಿಸಿತು. ಶ್ರೀಗುರುವು ಕ್ರಿಯಾದೀಕ್ಷಾಕಾಲದಲ್ಲಿ ಲಿಂಗದಲ್ಲಿಯೂ ಜಂಗಮ ದಲ್ಲಿಯೂ ಪ್ರಮಾದವಿಲ್ಲದೆ ವರ್ತಿಸೆಂದು "ದತ್ತಂಲಿಂಗಮಿದಂ ವತ್ಸಮಾ ಕದಾಚಿದ್ವಿಯೋಜಯ ಪ್ರಾಣವದ್ರಕ್ಷಣೀಯಂಹಿ ಪ್ರಾಣಲಿಂಗಮಿದಂತವ॥ ಪ್ರಮಾದಾತ್ಪತಿತೇ ಲಿಂಗೇ ಭಿನ್ನೇ ಚೋರಾದಿಭಿರ್ಹೃತೇ । ಪೀಠಾದುತ್ಕ್ರಮಿತೇವಾಪಿಸದ್ಯಪ್ರಾಣಾನ್ಪರಿತ್ಯಜ॥" ಮಯಾವಿನಿರ್ಮಿತಾಚಾರೆ ಪ್ರಸಾದೆ ಪಾದವಾರಿಣಿ । ಜಂಗಮೇನಿಜಲಿಂಗೈಕ್ಯೇವರ್ತತಾನುಪ್ರಮಾದತಃ ॥ ಮಗನೆ ಗುರುದತ್ತವಾದೀಲಿಂಗವನ್ನು ಎಂದೂ ಅಗಲಿಸಬೇಡ. ಈ ನಿನ್ನ ಪ್ರಾಣಲಿಂಗವ ನ್ನು ಪ್ರಾಣದಂತೆ ರಕ್ಷಿಸುವುದು. ಎಚ್ಚರಗೇಡಿತನದಿಂದ ಲಿಂಗವು ಬಿದ್ದುದಾದ ರೆ ಭಿನ್ನವಾದರೆ, ಕಳ್ಳರು ಮೊದಲಾದವರಿಂದ ಎತ್ತಿಹೋದರೆ ಪೀಠದಿಂದ ಎದ್ದರೆ, ಆಕೂಡಲೆ ಪ್ರಾಣವನ್ನು ತ್ಯಜಿಸು, ನನ್ನಿಂದ ನಿರ್ಮಿಸಲ್ಪಟ್ಟ ಆಚಾರದಲ್ಲಿ, ಪ್ರಸಾದದಲ್ಲಿ, ಪಾದೋದಕದಲ್ಲಿ, ಲಿಂಗೈಕ್ಯನಾದ ಜಂಗಮ ನಲ್ಲಿ ಎಚ್ಚರದಪ್ಪದಿರು—ಎಂಬವಚನಗಳಿಂದ ಬೋಧಿಸಿರುವನು.

ಈ ಬೋಧೆಯಿಂದ ಜಾಗರೂಕನಾದ ಶಿಷ್ಯನು ಗುರುಲಿಂಗ ಜಂಗ ಮದಲ್ಲಿ ಏಕಬುದ್ಧಿಯಿಂದ ವರ್ತಿಸಿ ಗುರುದತ್ತಾಚಾರವನ್ನು ಅಂಗದಲ್ಲಳವ ಡಿಸಿ ಗುರುಲಿಂಗಜಂಗಮ ಪಾದೋದಕ ಪ್ರಸಾದಗಳೆ ಜೀವನವಾಗಿ ಶಿವ ಮಯಶರೀರನಾಗುವನು. ಪಾದೋದಕ ಪ್ರಸಾದಗಳಿಂದ ಇಂದ್ರಿಯಾಂತಃಕ ರಣ ಪ್ರಾಣಗಳು ಪರಿಶುದ್ಧವಾದುವು. ಆ ಶುದ್ಧಿಯಿಂದ ಅವುಗಳಲ್ಲಿಯ ಚಿತ್ಪ ಕಾಶವು ಇಷ್ಟಲಿಂಗಮೂರ್ತಿಯಲ್ಲಿ ಕಂಗೊಳಿಸಿ ಒಳಹೊರಗೇಕವಾಯ್ತು. ಹೇಗಂದರೆ. ಪರಮಾತ್ಮನು ಪ್ರಕಾಶ ಮತ್ತು ವಿಮರ್ಶರೂಪನಾಗಿರುವನು. ಪ್ರಕಾಶವೆಂದರೆ ಶಿವನು ವಿಮರ್ಶವೆಂದರೆ ಶಕ್ತಿಯು. ಪ್ರಕಾಶವೆ ಅರ್ಥರೂ ಪವಾದ ಕಲಾತತ್ತ್ವ ಭುವನವೆಂಬ ಮೂರು ಅಧ್ವ ಅಥವಾ ವರ್ಗವಾ ಯ್ತು. ವಿಮರ್ಶವೆ ವಾಚಕವಾದ ವರ್ಣ ಮಂತ್ರಪದವೆಂಬ ಮೂರು ಅಧ್ವ ಅಥವಾ ವರ್ಗವಾಯ್ತು. ಪ್ರಮೇಯವು ಶಿವನು, ಪ್ರಮಾಣವು ಶಕ್ತಿ ಯು "ಅಸ್ತಿಹೇತ್ವಪದೇಶಾತ್ರ ಶಾಸ್ತ್ರಯುಕ್ತಿವಿನಿಶ್ಚಿತಂ । ವಾಗರ್ಥಮಯ

CC-0 Jangamwadi Math Collection. Digitized by eGangotri

ಯೇವೈತಜ್ಜಗತ್ಸ್ಥಾವರ ಜಂಗಮಂ ತ್ವಂಹಿವಾಗಮೃತಂ ಸಾಕ್ಷಾದಹಮರ್ಥಾಮೃತಂಪರಂ । ದ್ವಯಮಪ್ಯಮೃತಂ ಕಸ್ಮಾದ್ವಿಯುಕ್ತಮುಪಪದ್ಯತೇ ॥ ವಿದ್ಯಾಪ್ರತ್ಯಾಯಿಕಾತ್ವಂಮೇವೇದ್ಯೋಽಹಂ ಪ್ರತ್ಯಯಾತ್ತವ । ವಿದ್ಯಾವೇದ್ಯಾತ್ಮನೋರೇವವಿಶ್ಲೇಷಃಕಥಮಾವಯೋಃ ॥ ವಾ. ಸ. ಅ. ೨೩, "ಎಲೌ ದೇವಿ ಪ್ರಕಾಶರೂಪನಾದ ಎನಗೂ ವಿಮರ್ಶರೂಪಳಾದ ನಿನಗೂ ಪರಸ್ಪರ ವಿಯೋಗವಿಲ್ಲ. ಸಹಭಾವವಿದೆ ಎಂಬಲ್ಲಿ ಶಾಸ್ತ್ರದಿಂದ ನಿರ್ಧರಿಸಲ್ಪಟ್ಟ ಇನ್ನೊಂದು ಯುಕ್ತಿಯುಂಟು. ನೋಡು ! ಸ್ಥಾವರಜಂಗಮಾತ್ಮಕವಾದ ಜಗತ್ತು ಅರ್ಥ ಮತ್ತು ಶಬ್ದ ಎಂಬೆರಡು ರೂಪಗಳನ್ನುಳ್ಳದು. ಅದರಲ್ಲಿ ನೀನು ಅವಿನಾಶವಾದ ಶಬ್ದರೂಪೆಯು, ನಾನು ನಾಶವಿಲ್ಲದರ್ಥಸ್ವರೂಪನು. ಹೀಗಿರುವಲ್ಲಿ ಒಂದಕ್ಕೊಂದು ಈ ತತ್ತ್ವಗಳು ಅಗಲಿಕೆಯುಳ್ಳುವಾದರೆ ಅವು ಅಮೃತವೆನಿಸಲಿಕ್ಕಿಲ್ಲ, ಲೋಕದಲ್ಲಿರುವರ್ಥಗಳನ್ನು ಪ್ರಕಾಶಿಸುವ ವಿದ್ಯೆಯು ನೀನು ನಾನು ಆ ವಿದ್ಯಾಪ್ರತ್ಯಯ ಜ್ಞಾನದಿಂದ ವೇದ್ಯನಹೆನು. ಅಂದಬಳಿಕ ವಿದ್ಯೆಯು ವೇದ್ಯವೂ ಎಂಬುವಾದನಂಮಿಬ್ಬರಗಲಿಕೆ ಏತು ?

ಅಥವಾ ವಿಜ್ಞಾನ ಭೈರವದ ಟೀಕೆಯಲ್ಲುದಾಹರಿಸಿದ "ಭುವನಾದಿತ್ರಯಂ ವಾಚ್ಯಂ । ಪದಾದಿವಾಚಕಂತ್ರಯಂ । ಶಕ್ತಿರೇತಚ್ಚ ಸ್ವಾರ್ಥ್ಯಪಟ್ಕಂ ಶಕ್ತಿಮಾಂಸ್ತು ಮಹೇಶ್ವರಃ" ಎಂಬ ಪ್ರಮಾಣದಂತೆ ವಾಚ್ಯವಾಚಕಗಳೆರಡೂ ಶಕ್ತಿರೂಪವು. ಈ ಶಕ್ತಿಯನ್ನು ಸಾಮರಸ್ಯದಿಂದ ಕೂಡಿದವನು ಶಿವನು. ಅಂದಬಳಿಕ ವಾಯುವೀಯದಂತೆ ವಾಚ್ಯನು ಶಿವನಾಗಿಯು ವಾಚಕವು ಶಕ್ತಿಯಾಗಿಯು ಇರಲಿ; ಅಥವಾ ವಿಜ್ಞಾನ ಭೈರವದಂತೆ ವಾಚ್ಯವಾಚಕಗಳೆರಡೂ ಶಕ್ತಿಯಾಗಿ ಆ ಎರಡಕ್ಕೂ ಆಧಾರವಾದವನು ಶಿವನಾಗಲಿ ಶಕ್ತಿಗೂ ಶಿವನಿಗೂ ಅಗಲಿಕೆಯಿಲ್ಲ" ಇಂಗಡಲೊಳಿಂಪು ಬೆಳದಿಂಗಳೊಳು ತಂಪು ಕುಸುಮಂಗಳೊಳುಕಂಪು ಬೆರೆದಂತೆ ಪರಮನೊಳು ಲಿಂಗದಗಸುತೆಗೆನಸತನಪ್ಪಂ ॥ ಎಂದು ಶಕ್ತಿವಿಶಿಷ್ಟಶಿವಾದ್ವೈತ ಪ್ರತಿಷ್ಠಾಚಾರ್ಯನಾದ ನಿಜಗುಣನು ಕೊಂಡಾಡಿದಂತೆ ಶಿವಶಕ್ತಿಗಳು ಸಾಮರಸ್ಯದಿಂದರ್ಪವು. ಈ ನಿತ್ಯಸಂಬಂಧವೆಂಬ ಸಮಾನಾಯದ ಗುರುತಾಗಿಯೆ ಗುರುವು ಪೀಠವೆಂಬ ಶಕ್ತಿಸ್ಥಾನದಿಂದ ಪಿಂಡವೆಂಬ ಲಿಂಗವು ವಿಯೋಗವನ್ನು ಹೊಂದಿದುದಾದರೆ ಪ್ರಾಣವನ್ನು ಅರ್ಪಿಸೆಂದು ತಿಳಿಸಿದನು. ಅಂದರೆ ಜಗತ್ತಿನಲ್ಲಿ ಶಿವಶಕ್ತಿಗಳ ಸಾಮರಸ್ಯವನ್ನು ಸದಾಶಿವನೆಂದು ಹೇಳಿದನು. ಆದುದರಿಂದ ಇಂತಪ್ಪನಿತ್ಯಸಂಯೋಗವನ್ನು ಇಷ್ಟಲಿಂಗದಲ್ಲಿರುವ ಎಚ್ಚರ

CC-0. Jangamwadi Math Collection. Digitized by eGangotri

LIBRARY. Jangamwadi Math, VARANASI. Acc. No.

ಢಿಂದರಿತನಾಗಿ ಈ ಯೋಗಾಂಗದೀಕ್ಷೆಗೆ ಲಿಂಗವೆ ಗುರುವಾಯ್ತು. ಗುರುವು ಹೇಳಿದ ಮಂತ್ರವು ಆ ಲಿಂಗದಲ್ಲಡಗಿ ಲಿಂಗವಾಯ್ತು. ಲಿಂಗಮ ಗ್ನವಾದ ನೇತ್ರಾದಿಗಳೆ ವಿಷಯವಾಸನೆಯ ಪ್ರತಿಬಂಧವು ಇಲ್ಲದ ಸದಾಪ್ರ ಕಾಶದಿಂದ ಜಂಗಮವಾದುವು.

## ಜ್ಞಾನವಿಜ್ಞಾನ ದೀಕ್ಷೆಗಳು.

ಶ್ರೀ ಕ್ರಿಯಾ ಗುರುವು ಲಿಂಗದಂತೆಯೆ ಜಂಗಮದಲ್ಲಾದರು ಎಚ್ಚರ ದಿಂದಿರೆಂದು ಆಜ್ಞಾಪಿಸಿದನಲ್ಲ! ಗುರುಲಿಂಗಗಳಲ್ಲಿರುವ ಪೂಜ್ಯಭಾವವನ್ನೇ ಶಿಷ್ಯನು ಜಂಗಮಮೂರ್ತಿಯಲ್ಲಿ ಮಾಡುತ್ತಿರುವನು. ಜಂಗಮಪಾದೋ ದಕಪ್ರಸಾದನಿಷ್ಠನಾಗಿಹನು. ಜಂಗಮವೆಂದರೆ ಸ್ವರೂಪವನರಿತುವೈರಾ ಗ್ಯದಿಂದ ಚರಿಸುವ ಶಿವಯೋಗಿ "ಧ್ಯಾನಂಶೈವಂತಥಾ ಜ್ಞಾನಂ ಭಿಕ್ಷಾ ಚೈಕಾಂತಶೀಲತಾ। ಯತೇಶ್ಚತ್ವಾರಿಕರ್ಮಾಣಿ ನಪಂಚಮುಮಿಹೇಷ್ಯತೇ।" ಶಿವಧ್ಯಾನ ಶಿವಜ್ಞಾನಭಿಕ್ಷಾ ಏಕಾಂತ ಶೀಲತ್ವ ಇವು ನಾಲ್ಕುಯತಿಗಳ ಕರ್ತವ್ಯವು ಐದನೆಯದಿಲ್ಲ. ಸಿದ್ಧಾಂತಶಿಖಾಮಣಿ ಸ್ವಯಸ್ಥಲ. ಶಿಷ್ಯನು ತಾನು ಪರಿಪೂರ್ಣ ಶಿವಜ್ಞಾನವನ್ನು ಸಂಪಾದಿಸಲಿಕ್ಕೆ "ವಿಮುಕ್ತಭೋಗ ಲಾಲಸ್ಯೋ ವಿಷಯಾಂತರ ನಿಸ್ಪೃಹಃ। ಅಭ್ಯರ್ಥಯನ್ ಶಿವಂಮೋಕ್ಷಂ ಶರಣಾರ್ಥೀತಿ ಕಥ್ಯತೇ" ಭೋಗಲಾಲಸೆಯನ್ನು ಬಿಟ್ಟವನಾಗಿ ವಿಷಯಾಂ ತರಗಳ ಕಾಂಕ್ಷೆಯನ್ನು ತ್ಯಜಿಸಿ, ಮೋಕ್ಷವನ್ನೇ ಶಿವನಿಂದ ಬಯಸುವನು ಶರಣಾರ್ಥಿಯೆನಿಸುವನು. ಎಂಬುಕ್ತಿಯಿಂದ ಹಿಂದಿನ ನಾಲ್ಕು ಸ್ಥಳಗಳ ಲ್ಲಿಯು ಭಕ್ತಿಯಿಂದಲು ಯೋಗದಿಂದಲು ಭೋಗಲಾಲಸೆಯು ಕ್ಷಯವಾಗಿ ವಿಷಯಗಳಲ್ಲಿಯ ಬಯಕೆಗಳು ನಷ್ಟವಾಗಿದುವವು. ಆದರೆ ಭಕ್ತಿಯು ಉತ್ತಮಾವಸ್ಥೆಯು ಜ್ಞಾನವೂ ಜ್ಞಾನದಪರಿಪಕಾವಸ್ಥೆಯೂ ಭಕ್ತಿಯೂ ಆಗಿ ರುವುದರಿಂದ ಪರಿಪೂರ್ಣಭಾವವನ್ನು ಹೊಂದಲು ಭಕ್ತಿಯು ಜ್ಞಾನರೂಪವಾ ಗಬೇಕು. ಪರಿಪೂರ್ಣತೆಯ ತನಕ ವಿಷಯಲಾಲಸೆಯು ಕ್ಷಯವಾದರು ಮಲವೆಂಬಲಾಲಸೆಯ ಬೀಜವು ಉಳಿದಿರುವುದರಿಂದ ಜ್ಞಾನಾಭ್ಯಾಸವನ್ನು ಶಿಷ್ಯನು ಮಾಡುವನು. ಸಿದ್ಧನಾದ ಜಂಗಮನೆ ಈ ಜ್ಞಾನಾಭ್ಯಾಸಕ್ಕೆ ಆದರ್ಶವಾಗಿಹನು. ಮತ್ತು ಶಿವಾನುಭವವಚನಗಳಿಂದ ಭಕ್ತನ ಜ್ಞಾನವನ್ನು ಉದ್ದೀಪಿಸಬಲ್ಲನು. ಆದುದರಿಂದ ಈ ಜ್ಞಾನ ವಿಜ್ಞಾನ ದೀಕ್ಷೆಗಳಿಗೆ ಜಂಗಮನೆ ಗುರುವು.

ಗುರುಜಂಗಮತತ್ವಗಳಿಗೆ ಭೇದವಿಲ್ಲದರಿಂದಲೆ ಶ್ರೀ ಬಸವಣ್ಣನು ಪ್ರಭುವನ್ನು "ಕಾಡಲಸಂಗಮದೇವ" ಎಂದು ಸಂಬೋಧಿಸಿ ಮಾಡುವನು

CC-0. Jangamwadi Math Collection. Digitized by eGangotri

ಮತ್ತು ಉದ್ದೇಶಿಸುವನು. ಇತರ ಶರಣರಾದರು ತಮ್ಮ ಗುರುವಿನ ಅಂಕಿತದಿಂದಲೆ ಪ್ರಭುವನ್ನುದ್ದೇಶಿಸುವರು ಮತ್ತು ಸಂಬೋಧಿಸುವರು.

ಈಗ ವೀರಶೈವಮತ ರಹಸ್ಯವು ಮರೆಯಾಗಿ ಗುರುಲಿಂಗ ಜಂಗಮ ತತ್ವಗಳ ರಹಸ್ಯವೂ ಭಕ್ತಿಮಾರ್ಗದ ಮರ್ಮವೂ ತಿಳಿಯದೆ ಅವುಗಳಲ್ಲಿ ಹೀನೋತ್ತಮಕಲ್ಪನೆಗಳನ್ನು ಮಾಡಿ ಅನೇಕರು ಧರ್ಮಬಾಹ್ಯರಾಗುವರು. ಜಂಗಮವನ್ನು ವಂದಿಸುವುದು ಗುರುವಿನ ಹೀನತೆಯೆಂದು ಮಾನಿಸುವರು. ಗುರುಲಿಂಗ ಜಂಗಮಭಕ್ತರಲ್ಲಿ ತಾತ್ವಿಕ ಏಕತ್ವವಿರುವುದನ್ನು ಲಕ್ಷ್ಯದಲ್ಲಿ ತಂದು ಸಾಧಿಸಿದವರು ಆ ಭ್ರಾಂತಿಗೆ ಬೀಳರು. ಒಂದೇ ಪರಬ್ರಹ್ಮದ ಪೂಜ್ಯ ಪೂಜಕತ್ವವು ಸಾಮರಸ್ಯಕ್ಕೆ ಕಾರಣವಲ್ಲದೆ ಉಚ್ಚನೀಚತ್ವಕ್ಕಲ್ಲ. ಲಿಂಗವನ್ನು ಪೂಜಿಸಿ ಲಿಂಗಸಮರಸನಾಗಲಿಕ್ಕಲ್ಲವೆ ಪ್ರತಿಯೊಬ್ಬ ಮುಮುಕ್ಷುವಿನ ಪ್ರಯತ್ನವು? ಅಂದಬಳಿಕ ಪೂಜಕತ್ವದಲ್ಲಿ ಕಡಿಮೆಯತನವನ್ನು ಕಲ್ಪಿಸುವರು ಭ್ರಾಂತರು. ಸ್ವಲೀಲೆಯಿಂದ ಪೂಜ್ಯಪೂಜಕತ್ವವಾಯ್ತೆಂದು "ನಾಶಿವಸ್ಯ ಶಿವೋಪಾಸ್ತಿರ್ಘಟತೇ ಜನ್ಮಕೋಟಿಭಿಃ" ಕೋಟಿಜನ್ಮಗಳಿಂದಾದರು ಶಿವನಲ್ಲದವನು ಶಿವನನ್ನು ಪೂಜಿಸಲಾರನು. ಎಂದು ಮೊದಲಾದ ವಾಕ್ಯಗಳು ಮುಕ್ತಕಂಠದಿಂದ ಹೇಳುತ್ತಿರುವುವು. ಆದುದರಿಂದ ಪರಿಪೂರ್ಣ ಶಿವತ್ವದ ಅಭಿವ್ಯಂಜಕಗಳಾದ ಭಕ್ತಿಜ್ಞಾನ ವೈರಾಗ್ಯಗಳಲ್ಲಿ ಭಕ್ತಿಯೆ ಪ್ರಧಾನವಾಗಿ ಆ ಭಕ್ತಿಗೆ ಜ್ಞಾನವೈರಾಗ್ಯಗಳು ಅಂಗವಾಗಲು ಅದೇ ಬಸವಣ್ಣನ ಭಕ್ತಿ. ಜ್ಞಾನವೆ ಪ್ರಧಾನವಾಗಿ ಅದಕ್ಕೆ ಭಕ್ತಿವೈರಾಗ್ಯಗಳು ಅಂಗವಾಗಲು ಅದೇ ರೇವಣನ ಗುರುತ್ವ. ವೈರಾಗ್ಯವೆ ಪ್ರಧಾನವಾಗಿ ಭಕ್ತಿಜ್ಞಾನಗಳು ಅಂಗವಾಗಲಾಗಿ ಅದೇ ಪ್ರಭುವಿನ ಜಂಗಮತ್ವವು. ಭಕ್ತಗುರು ಜಂಗಮತ್ವಗಳು ಜಾತಿಯಿಂದಾದುವಲ್ಲ. ಎಂಬುದೇ ಶಾಸ್ತ್ರಸಿದ್ಧಾಂತವು.

ಭಕ್ತನು ಕ್ರಿಯಾಭಕ್ತಿ ಪ್ರಧಾನನಾದುದರಿಂದ ಗುರುಲಿಂಗಜಂಗಮದದಾಸನಾಗಿ ದಾಸೋಹಂ ಭಾವದಿಂದ ಚರಿಸುವನು. ಗುರುವು ಜ್ಞಾನಮಯನಾಗಿಸೋಹಂಭಾವದಿಂದಿದ್ದು ಲಿಂಗಜಂಗಮಗಳಲ್ಲಿ ಭಕ್ತಿಯಿಂದವರ್ತಿಸಿ ಭಕ್ತಿಜ್ಞಾನಗಳನ್ನು ಶಿಷ್ಯರಿಗೆ ಬೋಧಿಸುವನು. ಜಂಗಮನು ವೈರಾಗ್ಯಪರನಾಗಿ ಶಿವಾನುಭವದಲ್ಲಿ ತಣಿದು ಶಿವಭಕ್ತರಲ್ಲಿ ಚರಿಸಿ ಕೃತಾರ್ಥರನ್ನು ಮಾಡುವನು.

ಎಲ್ಲರಲ್ಲಿ ಈ ಎಲ್ಲ ಮೂರೂ ಬೇಕೆಂಬುದು, ಭಕ್ತಜಂಗಮ ಗುರುಗಳು ಲಿಂಗಪೂಜೆಯನ್ನು ಮಾಡುವುದರಿಂದ ಭಕ್ತಿಯೂ ಶಿವಜ್ಞಾನ ಸಂಪನ್ನರಾ

CC-0. Jangamwadi Math Collection. Digitized by eGangotri

ಗಬೇಕಾದುದರಿಂದ ಜ್ಞಾನವೂ, ಸಂಸಾರಲಂಪಟವನ್ನು ಬಿಡಬೇಕಾದುದರಿಂದ ವೈರಾಗ್ಯವೂ ಅವರೆಲ್ಲರಲ್ಲಿ ಕಂಡುಬರುವುದರಿಂದ ಒಡೆದು ತೋರುತ್ತಿದೆ.

ಇರಲಿ, ಹೀಗೆ ಶ್ರೀಮದಲ್ಲಮನು ವಿಜ್ಞಾನದೀಕ್ಷೆಯನ್ನು ಮಾಡಿದುದರಿಂದ ಸರ್ವವು ಸಮಂಜಸವು.

ಶ್ರೀ ಪ್ರಭುವು ವಿಜ್ಞಾನದೀಕ್ಷೆಯನ್ನು ಮಾಡಿದನೆಂಬುದು ಅವನುಪದೇಶದಿಂದ ಕಂಡುಬರುತ್ತಿದೆ. ಏಕೆಂದರೆ "ರಕ್ಷಿಸುವೆನೆಂದೆನುತ ಶೂನ್ಯದ ಲಕ್ಷ್ಯವನುದೀಕ್ಷೆಯನು ಮಾಡಿದ। ಮೋಕ್ಷಮಾರ್ಗದಲಿಂದು ಗೋರಕ್ಷಂಗೆ ಪ್ರಭುರಾಯ॥" ಎಂದು ಹೇಳಿಯದೆ. ಶೂನ್ಯವೆಂದರೆ "ಸರ್ವಾಲಂಬನಧರ್ಮೈಶ್ಚ ಸರ್ವತತ್ತ್ವೈರಶೇಷತಃ ॥ ಸರ್ವಕ್ಲೇಶಾಶಯೈಃಶೂನ್ಯಂನಶೂನ್ಯಂ ಪರಮಾರ್ಥತಃ॥ ಸಾವಸ್ಥಕಾಜ್ಞೇಯಾಮಾದೃಶಾಂ ಶೂನ್ಯತೋಚ್ಯತೇ। ನಪುನರ್ಲೋಕರೂಢ್ಯೈವನಾಸ್ತಿಕ್ಯಾರ್ಥಾಮಪಾತಿನೀ ॥" ಎಂಬ ವಿಜ್ಞಾನಭೈರವೋದಾಹೃತ ಪ್ರಮಾಣದಿಂದ ಶೂನ್ಯವೆಂದರೆ ಸರ್ವ ಉಪಾಧಿ ಧರ್ಮಗಳಿಂದಲು ಸರ್ವಕ್ಲೇಶಗಳಿಂದಲು ರಹಿತವಾದ .ಪರವಸ್ತುವು. ಈ ಅವಸ್ಥೆಯು ಶಾಸ್ತ್ರಸಂಕೇತದಿಂದ ಶೂನ್ಯವೆನಿಸುತ್ತದಲ್ಲದೆ ಲೋಕರೂಢಿಯಿಂದ ಶೂನ್ಯವಲ್ಲ. ಲೋಕರೂಢಿಯಿಂದ ಶೂನ್ಯವೆಂದಿದ್ದರೆ ನಾಸ್ತಿಕಮತ ಪ್ರವೇಶವಾದೀತು. ಇದು ಭಾವಲಿಂಗದ ಉಪದೇಶವು. ಈ ಭಾವಲಿಂಗದಲ್ಲಿ ಇಷ್ಟಲಿಂಗವು ಭೇದವಾಗಿಲ್ಲೆಂಬರ್ಥವನ್ನು ಪ್ರಭುವು ಇಷ್ಟಲಿಂಗವು ತನ್ನಲ್ಲಿಬೇರಾಗದ ಕುರುಹಿನಿಂದ ತೋರಿಸಿರುವನು. ಇಷ್ಟಲಿಂಗದ ಮಂತ್ರವು ನಾದದಲ್ಲಿಯು, ನಾದವು ಧ್ವನಿಯಲ್ಲಿಯು, ಧ್ವನಿಯಲ್ಲಿಯು ಪ್ರಾಣದಲ್ಲಿಯು ಪ್ರಾಣವು ಪಿಂಡದಲ್ಲಿಯು ಕೂಡಿಕೊಂಡು ಆ ಲಿಂಗವು ಭಕ್ತನಿಂದ ಅಭಿನ್ನವಾದುದನ್ನು ಅನುಭವಿಗಳು ಕಾಣುವರು. ಪ್ರಭುವು ಆ ಐಕ್ಯವನ್ನು ತನ್ನಮಹಿಮೆಯಿಂದ ಅಲೌಕಿಕರೀತಿಯಿಂದ ತೋರಿಸಿರುವನು.

ಶ್ರೀಗುರುವು ಕ್ರಿಯಾದೀಕ್ಷೆಯಲ್ಲಿ ಇಷ್ಟಲಿಂಗದೊಡನೆ ಭಾವಲಿಂಗದ ಐಕ್ಯವನ್ನು "ಭಾವನಾತೀತಮವ್ಯಕ್ತಂ ಪರಬ್ರಹ್ಮಶಿವಾಭಿಧಂ। ಇಷ್ಟಲಿಂಗಮಿದಂ ಸಾಕ್ಷಾದನಿಷ್ಟಪರಿಹಾರತಃ । ಧಾರಯೇದವಧಾನೇನ ಶರೀರೇ ಸರ್ವದಾಬುಧಃ" ಅಂತು ಇಂತು ಎಂಬ ಮೊದಲಾದ ಎಲ್ಲ ಭಾವನೆಗಳನ್ನು ಮೀರಿದ ನಿರುಪಾಧಿಕ ಪರಬ್ರಹ್ಮವು ಇಂದ್ರಿಯಗಳಿಗೂ ಅಂತಃಕರಣಕ್ಕೂ ವ್ಯಕ್ತವಾಗದಾಗಿ ಭಕ್ತನ ಅನಿಷ್ಟ ಪರಿಹಾರದ ದೆಸೆಯಿಂದ

CC-0. Jangamwadi Math Collection. Digitized by eGangotri

ಇಷ್ಟಲಿಂಗ ವೆನಿಸಿತು. ಅದನ್ನು ಭಕ್ತನು ಸದಾ ಧರಿಸಲು ಭಾವಲಿಂಗವೆ ಯಾಯಿತ್ತು. ಭಾವಲಿಂಗ ದೊಡನೆ ಇಷ್ಟಲಿಂಗದ ಐಕ್ಯವನ್ನು ಪ್ರಭುವು "ತೊಳಪ ತೇಜದ ಮುಗಿಲ ಮಿಂಚನು । ಝಳಿಪಿಸುವ ವೊಲು ಕೈಯ ಕುರುಹಿನ । ಬೆಳಗಬಿದಿರಿಸಲಲಂಗವಂಗವಲೈಕ್ಯವಾಗಿರಲು ॥ ಸೆಳೆದು ತುಡುಕಲು ಕೈಗೆ ಬೆಳಗಿನ । ಹೊಳಹದಾಗಿರೆ ಕಂಡು ಗುರುವಿನ । ನಿಲು ಕಡಿಗೆ ಬೆರಗಾಗುತಿರ್ದನು ಬಳಿಕ ಗೋರಕ್ಷ॥ ಇಂತೆಂದು ವರ್ಣಿಸಿದ ರೀತಿಯಿಂದ ತೋರಿಸಿಹನು.

## ಶೂನ್ಯಸಿಂಹಾಸನ.

ಇಂತಪ್ಪ ಜಗದ್ಗುರುವನ್ನು ಬಸವನು ಶೂನ್ಯಸಿಂಹಾಸನದಮೇಲೆ ಕುಳ್ಳಿರಿಸಿ ಪೂಜಿಸಿದನು. ಶೂನ್ಯಸಿಂಹಾಸನವು ಅನುಭವೈಕ ವೇದ್ಯವಾದುದು. ಅದನ್ನು ಪ್ರಭುಲಿಂಗ ಲೀಲಾಕಾರನು ವರ್ಣಿಸಿದ ಬಗೆಯೆಂದರೆ "ಅನುಗೊಳಿಸಿದನು ಶೂನ್ಯಸಿಂಹಾ। ಸನವಿದೆಂದದಕಿಟ್ಟ ಹೆಸರನು। ವಿನುತ ಪಶ್ಚಿಮಮಾರ್ಗವಲಿ ತಾಕಂಡುದೆಲ್ಲವನು । ಕನಕ ಮರಕತ ಮುಖ್ಯಮಣಿಗಳ । ಘನತರದ ಕೇವಣದಲಹರಿಯ। ನಿನುಗುವೆಸೆಯುವ ವಿಮಲ ಪೀಠವ ಬಸವ ನಿರ್ಮಿಸಿದ " ಇತ್ಯಾದಿ.

ಪಶ್ಚಿಮಮಾರ್ಗದಿಂದ ತನಗಾದ ಅನುಭವವನ್ನೆ ಶೂನ್ಯಸಿಂಹಾಸನದಲ್ಲಿ ತೋರಿಸಿ ಅದರ ಮೇಲೆ ತನ್ನ ಅಂತರಾತ್ಮದಲ್ಲಿ ತೋರಿದ ಶಿವತೇಜೋರೂಪನಾದ ಜಂಗಮಮೂರ್ತಿ ಅಲ್ಲಮನನ್ನು ಮೂರ್ತಿಗೊಳಿಸಿದನು. ತನ್ನಲ್ಲಿರುವ ಗುರುಲಿಂಗ ಜಂಗಮವೆ ಬಾಹ್ಯದಲ್ಲಿ ಗುರುಲಿಂಗ ಜಂಗಮವೆನಿಸಿ ಕುರುಹಾಗಿ ತೋರುತ್ತಿದೆಂಬುದು ವೀರಶೈವ ಸಮಯ ಸಿದ್ಧಾಂತವು ನೋಡು :—ಯೋಗಜಾಗಮದಲ್ಲಿ ಅನಾದಿ ಭಕ್ತ ಲಕ್ಷಣವು ಇಂತೆಂದು ಹೇಳಲ್ಪಟ್ಟಿದೆ—"ಶ್ರೀಮಾನ್ಮಹಾನಾದಿಭಕ್ತಃ ಸ್ವಪ್ರಕಾಶೋ ದ್ವಿತೀಯಕಃ ಯೋಸೌ ಬ್ರಹ್ಮೇತಿ ಸಂಪ್ರೋಕ್ತಃ ಶೈವತತ್ತ್ವಾರ್ಥ ವೇದಿಭಿಃ " ವೀರಶೈವ ಧರ್ಮಶಿರೋಮಣಿಯಲ್ಲುದಾಹರಿಸಿದ ಯೋಗಜಾಗಮ ವಾಕ್ಯವು. ಶಿವತತ್ತ್ವವನ್ನು ಬಲ್ಲವರು ಆವುದೊಂದು ಬ್ರಹ್ಮವೆನ್ನುವರೊ ಅದುವೆ ಅದ್ವಿತೀಯವಾದ ಅನಾದಿ ಭಕ್ತನು. "ಆಚಾರ ಪಂಚಕಂ ರೂಪಷಟ್ಕ ಮಾವರಣಾಷ್ಟಕಂ। ತನ್ವಷ್ಟಕಂ ಸ್ವಸ್ವರೂಪಾದಭಿನ್ನಂ ತಸ್ಯ ಬಿಭ್ರತಃ। ಪಶ್ಚಿಮೇ ಹೃದಯಾಂಭೋಜೇಸೂರ್ಯಕೋಟಿಸಮಪ್ರಭಃ। ನಿರಂಜನ ಚರೋಭಾತ್ಯನಾದಿಜಂಗಮಸಂಜ್ಞಕಃ" ಇದರಲ್ಲಿಯೂ ಅನಾದಿ ... ಯೋಗಜಾಗ

CC-0. Jangamwadi Math Collection. Digitized by eGangotri

ಮ ವಾಕ್ಯಗಳು:—ಸದಾಚಾರ ಲಿಂಗಾಚಾರ ಶಿವಾಚಾರ ನಿಯತಾಚಾರ ಗಣಾಚಾರವೆಂಬ ಪಂಚಾಚಾರಗಳನ್ನೂ, ಅಖಂಡತ್ವ ಪರಿಪೂರ್ಣತ್ವ ನಿತ್ಯತ್ವ ಚಿತ್ಪ್ರಕಾಶತ್ವ ಚಿಪ್ರಸತ್ವ ಪರಮಾನಂದತ್ವ ಎಂಬ ಆರು ರೂಪಗಳನ್ನೂ, ಗುರುಲಿಂಗ ಜಂಗಮಪ್ರಸಾದ ಪಾದೋದಕ ವಿಭೂತಿ ರುದ್ರಾಕ್ಷ ಮಂತ್ರವೆಂಬ ಅಷ್ಟಾವರಣಗಳನ್ನೂ, ಲಿಂಗಾಂಗ, ಮಂತ್ರಾಂಗ, ಶಿವಾಂಗ, ಶಕ್ತ್ಯಂಗ ಬ್ರಹ್ಮಾಂಗ ಜ್ಞಾನಾಂಗ, ಪದಾರ್ಥಾಂಗ, ಎಂಬ ಎಂಟು ತನುಗಳನ್ನೂ ತನ್ನ ಸ್ವರೂಪದಿಂದ ಬೇರೆಯಾಗದೆ ಧರಿಸಿದ ಅನಾದಿಭಕ್ತನ ಪಶ್ಚಿಮ ಹೃದಯದಲ್ಲಿ ಸೂರ್ಯಕೋಟಿ ಪ್ರಕಾಶದಿಂದೊಪ್ಪುವ ಅನಾದಿ ಜಂಗಮ ಸಂಜ್ಞೆಯುಳ್ಳ ನಿರಂಜನ ಚರನಿರುವನು.

ಈ ಪ್ರಮಾಣಕ್ಕನುಸರಿಸಿ ಬಸವನ ಅನುಭವವಿತ್ತು. ಆದುದರಿಂದ ಇಲ್ಲಿ ಶೂನ್ಯಸಿಂಹಾಸನವೆಂದರೆ ಭಕ್ತನ ಪಶ್ಚಿಮ ಹೃದಯಸ್ಥಾನವು. ಅಲ್ಲಿ ಒಪ್ಪುವ ಶಿವಪ್ರಕಾಶವೆ ಬಾಹ್ಯರೂಪುಗೊಂಡ ಅಲ್ಲಮನು. ಅನಾದಿ ಭಕ್ತನ ಹೃದಯದಲ್ಲಿರುವ ಶೂನ್ಯಸಿಂಹಾಸನವು ಆ ಭಕ್ತನನ್ನು ಬಿಟ್ಟು ಬಾಹ್ಯದಲ್ಲಿರಲಾರದು. ಒಳಗಿನ ಜಂಗಮದಲ್ಲಿ ಅಭಿನ್ನನಾದ ಪ್ರಭುವನ್ನು ಶೂನ್ಯಸಿಂಹಾಸನದಬಾಹ್ಯ ಪ್ರಕಟನವಾದ ಗದ್ದುಗೆಯಲ್ಲಿ ಬಸವನು ಪೂಜಿಸಿದನು. ಜಂಗಮ ಪೀಠದಂತೆ ಗುರು ಪೀಠವಾದರು ಅನಾದಿ ಭಕ್ತನಂಗದಲ್ಲಿರತಕ್ಕುದಲ್ಲದೆ ಬಾಹ್ಯದಲ್ಲಿರದು.

ಗುರುವಾದ ಕೂಡಲಸಂಗಮನಿಗೂ ಜಂಗಮನಾದ ಅಲ್ಲಮನಿಗೂ ಭೇದವಿಲ್ಲವರಿಂದಲು, ಜ್ಞಾನ ಪರಿಪೂರ್ಣತೆಯೆ ಗುರುವೆನಿಸುತ್ತಿರುವುದರಿಂದಲು, ಪರಿಪೂರ್ಣತೆಯೆ ಚಿತ್ಪ್ರಕಾಶವೆ ಜಂಗಮವಾಗಿರುವುದರಿಂದಲು ಆಚಾರ್ಯಪೀಠವು ಶೂನ್ಯಪೀಠವಲ್ಲದಾಗಿತು.

## ಮಠಾಧಿಪತ್ಯವು.

ಇಲ್ಲಿ ಸಾಂಪ್ರತ ಪದ್ಧತಿಯಿಂದಾಗುವ ಒಂದು ವಿಷಯವನ್ನು ವಿವೇಚಿಸಬೇಕಾಗಿದೆ. ಆರೊಬ್ಬ ಜಂಗಮ ಅಥವಾ ವಿರಕ್ತ ಮೂರ್ತಿಗಳಿಗಾಗಿ ಮಠವನ್ನು ಕಟ್ಟಿಸಿ ಅದಕ್ಕೆ ಅವರನ್ನು ಸ್ವಾಮಿಗಳನ್ನು ಮಾಡಿ ಒಂದು ಕಾಗದವನ್ನು ಬರೆದು ಕೊಟ್ಟು ಅದನ್ನು ಅವರ ಸೊತ್ತನ್ನು ಮಾಡಿಕೊಡುವ ಪರಿಪಾಟಿಯುಂಟು. ಅದರಂತೆಯೆ ಬಸವನು ಅಲ್ಲಮನಿಗೊಂದು ಮಠವನ್ನು ಕೊಟ್ಟು ಸ್ವಾಮಿಯನ್ನುಮಾಡಿದನೆಂಬ ಶಂಕೆಯು ಅಥವಾ ತಿಳುವಳಿಕೆಯು

CC-0. Jangamwadi Math Collection. Digitized by eGangotri

ಮೇದ ಪ್ರಜ್ಞರಲ್ಲಿ ಹುಟ್ಟಬಹುದು. ಶಿವಬೋಧೆಯನ್ನು ಮಾಡುತ್ತ ಚರಿಸುವ ಚರಲಿಂಗವಾದ ಜಂಗಮ ಮೂರ್ತಿಯು ಮಠದ ಸೊತ್ತನ್ನು ಸ್ವೀಕರಿಸುವನಲ್ಲ. ಇದಕ್ಕೆ ಪ್ರಭುವಚನವೇ ಸಾಕ್ಷಿ—" ಪರಮ ಪರತತ್ತ್ವ ಪರಮಾರ್ಥ ಪರಾಪರ ವಾಙ್ಮನಕ್ಕಗೋಚರ ಶಬ್ದ ಗಂಭೀರ ಉಪಮಾತೀತ ಉನ್ನತ ಪರಶಿವಜ್ಞಾನ ಜ್ಯೋತಿಸುಜ್ಞಾನ ಪ್ರಭೆಯ ಬೆಳಗಿನೊಳಗೆ ಸುಳಿದಾಡುವ ಮಹಾಮಹಿಮಂಗೆ ಶಿವಜ್ಞಾನವೆ ಶೃಂಗಾರ; ಮಹಾ ಬೆಳಗೆ ವಿಭೂತಿ; ಪಂಚಬ್ರಹ್ಮವೆ ದರುಶನ; ಗಗನಸ್ಥಾನವೆ ಕಂಥೆ; ಆಕಾಶವೆ ಟೊಪ್ಪರ; ಅಜಾಂಡ ಬ್ರಹ್ಮಾಂಡವೆ ಕರ್ಣಕುಂಡಲ; ಆದಿಆಧಾರವೆ ಕಕ್ಷಪಾಳ; ಅನಾಹತವೆ ಒಡ್ಡಿಯಾಣ; ಅದ್ವೈತವೆ ಯೋಗವಟ್ಟಿಗೆ; ಆಗಮ್ಯವೆ ಯೋಗವಾವುಗೆ; ಅಚಲತೆಯೆ ಖರ್ಪರ; ಪ್ರಾಣವೆ ಲಾಕುಳ; ಆಚಾರವೆ ಸುಳುಹು; ಅಕಲ್ಪಿತವೆ ಭಿಕ್ಷ; ಕೊಂಡುದೆ ಗಮನ; ನಿಂದುದೆ ನಿವಾಸ; ನಿಶ್ಚಿಂತವೆಂಬ ಆಶ್ರಮದೊಳಗೆ ನಿರಾಕುಳವೆಂಬ ಸಿಂಹಾಸನವನಿಕ್ಕಿ, ಗಗನಗಂಭೀರ ಬಾವಿಯೊಳಗೆ ಅಗೋಚರದ ಅಗ್ಘವಣಿಯ ತಂದು, ಮಹಾಘನ ಬೆಳಗಿನೊಳಗೆ ಮಹಾಘನ ಪ್ರಾಣಲಿಂಗಕ್ಕೆ ಮಂಗಳ ಬೆಳಗಿನಲ್ಲಿ ಮಜ್ಜನಕ್ಕೆರೆದ, ಬಿಂದ್ವಾಕಾಶವೆ ಗಂಧ, ಮಹಾಕಾಶವ ಅಕ್ಷತೆ, ಪರಾಪರವೆ ಪತ್ರಪುಷ್ಪ, ನೈರ್ಮಲ್ಯವೆ ಲಿಂಗಾರ್ಚನೆ, ಮಹಾಪ್ರಕಾಶವೆ ಪೂಜೆ, ನಿತ್ಯನಿರಂಜನವೆ ಧೂಪಾರತಿ, ಸಕಲ ಭುವನಾದಿ ಭುವನಂಗಳೆ ನೈವೇದ್ಯ, ಆಚಾರವೆ ಅರ್ಪಿತ, ಮಹತ್ತತ್ತ್ವವೆ ಶೀತಾಳ. ಅಖಂಡಿತವೆ ಅಡಿಕೆ, ಏಕೋಭಾವವೆ ಎಲೆ, ಶುದ್ಧಶಿವಾಚಾರವೆ ಸುಣ್ಣ, ವಿವೇಕ ವಿಚಾರವೆಂಬ ತಾಂಬೂಲವಂ ಸ್ವೀಕರಿಸಿ, ಮಹಾಲಿಂಗದ ಪರಿಣಾಮವೆ ಪ್ರಸಾದ, ಸಮ್ಯಗ್ ಜ್ಞಾನವೆ ಸಂತೋಷ, ಸಹಜ ನಿರಾಭಾರಿಗಳ ಮೇಳದಿಂ ನಿಸ್ಸೀಮ ನಿರ್ಭ್ರಾಂತಿ ಸಂಗದಲ್ಲಿ ನಿರಾಸಪಥ, ಅನುಕೂಲ ನಿಶ್ಶಬ್ದವೆ ಅನುಭವ ಅನುಪಮ ಶೂನ್ಯವೆ ವಿಶ್ರಾಮ. ನಿರಾಕಾರವೆ ನಮನ ನಿರಂತರ ಪಾತಾಳ ಊರ್ಧ್ವಪವನ ತ್ರಿಭುವನ ತ್ರಿಭುವನಗಿರಿಯೆಂಬ ಪರ್ವತವನೇರಿ, ಕಾಯವೆಂಬ ಕದಳಿಯ ಹೊಕ್ಕು ಸುಳಿದಾಡುವ ಮಹಾಮಹಿಮಂಗೆ ಇಹಲೋಕವೇನು ಪರಲೋಕವೇನು. ಅಲ್ಲಿಂದ ತ್ರಿಗಮ್ಯ ಪರಮಜ್ಞಾನದ ಸಿದ್ಧಿ ಮಹಾಲಿಂಗದ ಬೆಳಗು, ಗುಹೇಶ್ವರ ನಿಮ್ಮ ನಿಜವನರಿದ ಮಹಾಮಹಿಮಂಗೆ ನಮೋ ನಮೋ ಎಂಬೆನು" ಇಂತಹ ಬಯಲು ಮೂರ್ತಿಯು ಮಠಾಧಿಪತ್ಯವನ್ನು ಸ್ವೀಕರಿಸುವುದಲ್ಲ. ಬಸವಣ್ಣನೆಂಬ ಅನಾದಿಭಕ್ತನು ಬಾಹ್ಯಮಠವನರ್ಪಿಸುವನಲ್ಲ.

CC-0. Jangamwadi Math Collection. Digitized by eGangotri

## ಪ್ರಭುವಿನ ನಿರ್ವಾಯಲವು.

ಬಸವಾದಿಗಳಿಂದ ಪೂಜೆಯನ್ನು ಹೊಂದಿ ಜ್ಞಾನೋಪದೇಶವಂಮಾಡಿ ಕಲ್ಯಾಣದಿಂದ ಬೀಳ್ಕೊಂಡು ಸಂಚರಿಸುತ್ತ ಗೋರಕ್ಷಾದಿಗಳನ್ನುದ್ಧರಿಸಿ ಅಂತರಂಗದನುಭವಕ್ಕೆ ಬಾಹ್ಯದಲ್ಲಿ ಜೋಲುವ ಶ್ರೀ ಶೈಲದ ಕದಳಿಯಲ್ಲಿ ಪ್ರಭುವು ಬಯಲಾದನೆಂಬು ಆತನ ವಚನದಿಂದ ತಿಳಿಯುತ್ತದೆ ನೋಡು:-

"ಕಾಮವೆಂಬ ಕದಳಿಯ ಗೆಲಬಲ್ಲವರಾರನು ಕಾಣೆನು. ಸಂಸಾರವೆಂಬ ಸಪ್ತ ಸಮುದ್ರವು ಬಳಸಿ ಬಂದಿಪ್ಪವು. ಭವವೆಂಬ ಮಹಾರಣ್ಯದೊಳು ಪಂಚೇಂದ್ರಿಯವೆಂಬ ವಿಷದ ಮಳೆ ಸುರಿಯುತ್ತಿಪ್ಪದು. ಅಷ್ಟಮದಗಜಂಗಳು ಬೀದಿವರಿದಿಪ್ಪವು ಕಾಮವೆಂಬ ಕೂರಂಬಿನ ಸೋನೆಸುರಿವುತ್ತಿಪ್ಪದು. ಮತ್ಸರವೆಂಬ ಮಹಾಸರ್ಪಂಗಳು ಕಿಡಿಯನುಗಳುತ್ತಿರ್ಪವು ತಾಪತ್ರಯವೆಂಬ ಕೆಂಡದ ಮಳೆಯು ಅದಿ ಇಡಬಾರದು. ಅಹಂಕಾರವೆಂಬ ಗಿರಿಗಳು ಅಡ್ಡಬಿದ್ದಿಪ್ಪವು. ಪಂಚಭೂತಗಳೆಂಬ ಭೂತಭಯ ದಿಟ್ಟಿಸಬಾರದು ಇಂತಪ್ಪಕದಳಿಯ ಹೊಗಲರಿಯದೆ ದೇವದಾನವ ಮಾನವರೆಲ್ಲರು ಮತಿಗೆಟ್ಟು ಮರುಳಾಗಿ ಹೊರದೆಗದೋಡಿದರು. ಅಂಗಾಲಕಣ್ಣವರು ಮೈಯ್ಯೆಲ್ಲ ಕಣ್ಣವರು ತಲೆಬಾಲಗೆಟ್ಟರು. ನಾನೀ ಕದಳಿಯ ಹೊಕ್ಕು ಹೊಯದಾಡಿ ಮುಳ್ಳುಮುಸೆ ಮುಟ್ಟದೆ ಕದಳಿವರೆದುಗೆಲಿದುತ್ತರಿಸಿ ಗುಹೇಶ್ವರನೆಂಬ ಲಿಂಗದ ನಿಜಸಮಾಧಿಯಲ್ಲಿ ನಿಮ್ಮ ಪರವಶನಾಗಿ ನಿರಾಳಕೆ ನಿರಾಳವಾಗಿದ್ದೆನಯ್ಯ"

ಪ್ರಭುವು ನಿರಾಕಾರವಾದ ಸಂಗತಿಯನ್ನು ಬಸವನು ದಿವ್ಯದೃಷ್ಟಿಯಿಂದರಿತು ಬಿನ್ನಯಿಸಿದ ವಚನವು— ಲಿಂಗಗಭೀರಮನಗೆಟ್ಟುದಲ್ಲ। ಜಂಗಮಗಭೀರ ಸುಳುಹುಗೆಟ್ಟದಲ್ಲ! ಪ್ರಸಾದ ಗಭೀರ ರೂಪುಗೆಟ್ಟುದಲ್ಲ! ಆಚಾರಗಭೀರ ಅವಯವಗೆಟ್ಟದಲ್ಲ! ಜ್ಞಾನ ಗಭೀರ ನಡೆಗೆಟ್ಟುದಲ್ಲ! ಕೂಡಲಸಂಗಮ ದೇವರಲ್ಲಿ ಪ್ರಭುವು ನಿಜವನೈದಲು ಸಂಗನ ಬಸವಣ್ಣನ ಪ್ರಾಣಒಡನೆ ಬಳಿಸಂದಿತಲ್ಲ!" ಚೆನ್ನಬಸವನ ವಚನವು:-"ಎನ್ನನು ಭವದಗಮ್ಯವೆ. ಎನ್ನರುವಿನ ವಿಶ್ರಾಮವೆ! ಎನ್ನ ಭಾವದ ಬಯಕೆಯೆ! ಎನ್ನ ಜೀವದ ನಿಲ್ಕುವೆ! ಎನ್ನ ಪರಿಣಾಮದ ಮೇರುವೆ! ಎನ್ನ ಮನದ ಮಹಿಮನೆ! ನಿಮ್ಮ ಸುಳುಹು ಎತ್ತಲಡಗಿತ್ತು? ಎಲೆಲಿಂಗವೆ ನೀಮ ನಾಮವೆತ್ತ ನಿರ್ನಾಮವಾಯಿತ್ತು? ಎಲೆ ಪರಮಗುರುವೆ ಕೂಡಲ ಚೆನ್ನ ಸಂಗಮನಲ್ಲಿ ಉರಿಮುಂಡ ಕರ್ಪೂರದಂತೆ ಆದೆಯಲ್ಲ ಪ್ರಭುವೆ!" ಇತ್ಯಾದಿ ಯಾಗಿ ಮಾಚಿತಂದೆ, ಸೊಡ್ಡಳದಬಾಚರಸ ಮೊದಲಾದವರು ಶಿವಾನುಭವಮಯವಾದ ವಚನಗಳನ್ನಾಡಿರುವರು.

CC-0. Jangamwadi Math Collection. Digitized by eGangotri

ಇದೀಗ ಶ್ರೀಮದಲ್ಲಮ ಚರಿತ್ರಾಂಬುಧಿಯೊಳಗಣಬಿಂದು—ಈಲೇಖ ದಲ್ಲುದಾಹರಿಸಿದ ಶ್ರೀಮದಲ್ಲಮನ ವಚನಗಳಿಂದ ವೀರಶೈವ ಶರಣರ ವಚ ಗಳ ಗಾಂಭೀರ್ಯವೂ ಸಾರವೂ ಗೊತ್ತಾಗುತ್ತದೆ. ಈ ವಚನಗಳಿಂದಲ್ಲದೆ ವೀರಶೈವ ಮತದ ನೂರೊಂದು ಸ್ಥಳಗಳು ಕರಬಿಲ್ವದಂತೆ ಸಿದ್ಧವಾಗವು. ಆ ಗಮ ವಾಕ್ಯಗಳಲ್ಲಿ ವೀರಶೈವ ಮತದ ಆರು ಸ್ಥಳಗಳ ವಿವರವಿದೆಯಾದರು ಅದು ಅತಿ ಸಂಕ್ಷೇಪವಾದುದು. ವೀರಶೈವಧರ್ಮವನ್ನು ಕನ್ನಡ ವಚನಗಳ ಕನ್ನಡಿಯಂತೆ ಬೋಧಿಸುತ್ತವಲ್ಲದೆ ಇತರ ಆಗಮಾದಿಗಳಲ್ಲಿ ಸಹ ಅದು ಸ್ಪಷ್ಟವಾಗಿಲ್ಲ. ಈ ವಚನಗಳು ಪರಮೇಶ್ವರನನುಗ್ರಹಿಸಿದ ವೇದವೆನ ಲಿಕ್ಕೆ ಅಡ್ಡಿ ಇಲ್ಲ—ಈ ವಿಷಯದಲ್ಲಿ ಕ್ರಿಯಾಸಾರಕಾರನು ಅಂದುದು ವೇ ದನೀಯವಾಗಿದೆ—"ಏಕೋತ್ತರಶತಸ್ಥಲಾನಾಂ ಷಟ್ಸ್ಥಲಾಂತರ್ಗತತ್ವೇ ನ ನ ತೇಷಾಂ ಪೃಥಗುಪದೇಶಃ। ತದ್ಭೇದಸ್ತು ಭಾಷಾಪ್ರಬಂಧಾದೇವಾವಗಂ ತವ್ಯಃ।" ನೂರೊಂದು ಸ್ಥಲಗಳು ಆರು ಸ್ಥಳಗಳಲ್ಲಿಯೆ ಸಮಾವೇಶವಾ ಗುವುದರಿಂದ ಅವುಗಳನ್ನು ಸ್ವತಂತ್ರವಾಗಿ ಹೇಳಿಲ್ಲ. ಅವುಗಳ ಭೇದದ ವನ್ನು ಭಾಷಾ ಪ್ರಬಂಧ (ವಚನಶಾಸ್ತ್ರ) ದಿಂದ ತಿಳಿಯತಕ್ಕದು. ಕ್ರಿಯಾ ಸಾರ ಕಾರನು ಬ್ರಹ್ಮಸೂತ್ರಗಳಿಗೆ "ಪಿಂಡಾದಿ ಜ್ಞಾನಶೂನ್ಯಾಂತ ಮೇ ಕೋತ್ತರಶತಸ್ಥಲಂ। ಷಟ್ಸ್ಥಲಂ ಲಿಂಗ ಭೇದಂಚ ಜಿಜ್ಞಾಸು ರ್ಭಕ್ತಿಪೂ ರ್ವಕಂ। ಅಧಿಕಾರೀಸ ವಿಜ್ಞೇಯಸ್ತ್ಯಕ್ತ ಸರ್ವೇಷಣಃ ಸ್ವಯಂ॥" ಪಿಂ ಡಾದಿ ಜ್ಞಾನಶೂನ್ಯಾಂತವಾದ ನೂರೊಂದು ಸ್ಥಲವನ್ನು ಷಟ್ಸ್ಥಲವನ್ನೂ ಆಚಾರಾದಿ ಲಿಂಗಭೇದವನ್ನೂ ಭಕ್ತಿಪೂರ್ವಕವಾಗಿ ವಿಚಾರಿಸ ಬೇಕೆಂಬನು ಶಿವಾದ್ವೈತಕ್ಕೆ ಅಧಿಕಾರಿಯಾಗುವನೆಂದು ಹೇಳಿ ಸಂಸ್ಕೃತದಲ್ಲಿರುವ ಪುರಾ ಣಾಗಮೋಪ ನಿಷತ್ತುಗಳಿಂದ ಷಟ್ಸ್ಥಳ ವಿಷಯವನ್ನಷ್ಟೆ ಪ್ರತಿಪಾದಿಸಲು ಸಮರ್ಥನಾಗಿ, ಆ ಷಟ್ಸ್ಥಳದ ವಿಶೇಷ ಸ್ವರೂಪವನ್ನು ವ್ಯಕ್ತ ಪಡಿಸಿ ಲಿಂ ಗಾಂಗಗಳ ಸಾಮರಸ್ಯವನ್ನು ದೃಢೀಕರಿಸುವ ನೂರೊಂದು ಸ್ಥಳಗಳನ್ನು ಸಂಸ್ಕೃತ ಗ್ರಂಥಗಳ ಆಧಾರದಿಂದ ಹೇಳಲಾರದೆ ಕನ್ನಡ ವಚನ ಗ್ರಂಥಗಳ ನ್ನೇ ತೋರಿಸಿರುವುದರಿಂದ ಅವುಗಳ ಪ್ರಾಮಾಣ್ಯವನ್ನು ಬಲ್ಲವರೆಂದೂ ಶಂಕಿಸಲಾರರು. ಸುಲಭವಾದುದೊಂದು ವಚನದಿಂದ ಇದನ್ನು ತೋರಿ ಸುವೆನು

## ಶ್ರೀಮಹಾದೇವಿಯಕ್ಕನದೊಂದು ವಚನ.

ವೈದಿಕ ಮತಗಳೆಲ್ಲ ಯಜ್ಞ ಪ್ರಧಾನ ವಾದುವು. ಆಯಜ್ಞವು ಕರ್ಮಯಜ್ಞ, ಜ್ಞಾನಯಜ್ಞ, ಜಪಯಜ್ಞ ಮುಂತಾಗಿಯದೆ. ವೀರಶೈ ವವು ಜ್ಞಾನಯಜ್ಞ ಭಕ್ತಿಯಜ್ಞ ಮಯವಾಗಿದೆ. ಪೂರ್ವಕಾಂಡಿಗಳು

CC-0. Jangamwadi Math Collection. Digitized by eGangotri

ಹವಿಃಶೇಷವನ್ನು ಭುಂಜಿಸುವಂತೆ ಭಕ್ತಿಮಯವಾದ ವೀರಶೈವಧರ್ಮವು ಸಹಜವಾಗಿ ಗುರುಲಿಂಗ ಜಂಗಮಾರ್ಪಿತವಾದುದನ್ನೆ ಭಕ್ತನು ಭುಂಜಿಸಬೇಕು. ಎಂದು ತಿಳಿಸುವುದು—ಅದರಿಂದಲ್ಲದೆ ಶಿವಜ್ಞಾನವಾಗದು—ಈ ಸಿದ್ಧಾಂತವನ್ನು ಲಲಿತವಾಗಿ ಹೇಳಿದ ಅಕ್ಕನವಚನವಿದು.

"ನಾನು ಮಜ್ಜನವ ಮಾಡುವುದಕ್ಕೆ ಮುನ್ನವೆ ಜಂಗಮಕ್ಕೆ ಮಜ್ಜನವ ಮಾಡಿಸುವೆ. ನಾನು ಸೀರೆಯನುಡುವುದಕ್ಕೆ ಮುನ್ನವೆ ಜಂಗಮಕ್ಕೆ ದೇವಾಂಗವನುಡಿಸುವೆ. ನಾನು ಪರಿಮಳವ ಲೇಪಿಸುವುದಕ್ಕೆ ಮುನ್ನವೆ ಜಂಗಮಕ್ಕೆ ಸುಗಂಧ ದ್ರವ್ಯಂಗಳ ಲೇಪಿಸುವೆ. ನಾನು ಅಕ್ಷತೆಯನಿಡುವುದಕ್ಕೆ ಮುನ್ನವೆ ಜಂಗಮಕ್ಕೆಪರಿಮಳಪುಷ್ಪವ ಮುಡಿಸುವೆ, ನಾನು ಧೂಪದವಾಸನೆಯ ಕೊಳ್ಳುವ ಮುನ್ನವೆಜಂಗಮಕ್ಕೆ ಧೂಪದವಾಸನೆಯ ಕೊಡುವೆ. ನಾನು ದೀಪಾರತಿಯ ನೋಡದ ಮುನ್ನವೆ ಜಂಗಮಕ್ಕೆ ಆರತಿಯ ನೋಡಿಸುವೆ. ನಾನು ಸಕಲ ಪದಾರ್ಥವಸ್ವೀಕರಿಸುವ ಮುನ್ನವೆ ಜಂಗಮಕ್ಕೆ ಮಿಷ್ಟಾನ್ನವ ನೀಡಿಸುವೆ. ನಾನು ಪಾನಂಗಳ ಕೊಳ್ಳದ ಮುನ್ನವೆ ಜಂಗಮಕ್ಕೆ ಅಮೃತಪಾನಂಗಳ ಕೊಡುವೆ. ನಾನು ಕೈಯ ತೊಳೆಯದ ಮುನ್ನವೆ ಜಂಗಮಕ್ಕೆ ಹಸ್ತ ಪ್ರಕ್ಷಾಲನವ ಮಾಡಿಸುವೆ. ನಾನು ವೀಳಯವ ಮಾಡುವ ಮುನ್ನವೆ ಜಂಗಮಕ್ಕೆ ತಾಂಬೂಲವ ಕೊಡುವೆ. ನಾನು ಗದ್ದುಗೆಯ ಮೇಲೆ ಕುಳ್ಳಿರುವುದಕ್ಕೆ ಮುನ್ನವೆ ಜಂಗಮಕ್ಕೆ ಉನ್ನತಾಸನವನಿಕ್ಕುವೆ. ನಾನು ಸುನಾದಂಗಳ ಕೇಳುವುದಕ್ಕೆ ಮುನ್ನವೆ ಜಂಗಮಕ್ಕೆ ಸುಗೀತ ವಾದ್ಯಂಗಳ ಕೇಳಿಸುವೆ. ನಾನು ಸುರೂಪಗಳ ನೋಡುವುದಕ್ಕೆ ಮುನ್ನವೆ ಜಂಗಮಕ್ಕೆ ಗೀತನೃತ್ಯಂಗಳ ನೋಡಿಸುವೆ. ನಾನು ಪುರುಷ ಸಂಯೋಗವ ಮಾಡುವುದಕ್ಕೆ ಮುನ್ನವೆ ಜಂಗಮಕ್ಕೆ ಅಂಗಸಂಯೋಗವ ಮಾಡಿಸುವೆ. ನಾನು ಭೂಷಣಂಗಳ ತೊಡುವುದಕ್ಕೆ ಮುನ್ನವೆ ಜಂಗಮಕ್ಕೆ ಆಭರಣಂಗಳ ತೊಡಿಸುವೆ. ನಾನು ವಾಹನಂಗಳ ನೇರುವುದಕ್ಕೆ ಮುನ್ನವೆ ಜಂಗಮಕ್ಕೆ ವಾಹನಂಗಳನೇರಿಸುವೆ. ನಾನು ಮನೆಯೊಳಗಿರುವುದಕ್ಕೆ ಮುನ್ನವೆ ಜಂಗಮಕ್ಕೆ ಗೃಹವ ಕೊಡುವೆ. ಇಂತೀ ಹದಿನಾರು ತೆರದ ಭಕ್ತಿಯನ್ನು ಚರಲಿಂಗಕ್ಕೆ ಕೊಟ್ಟು, ಆಚರಲಿಂಗಮೂರ್ತಿ ಭೋಗಿಸಿದ ಬಳಿಕ ನಾನು ಪ್ರಸಾದ ಮುಂತಾಗಿ ಭೋಗಿಸುವೆನಲ್ಲದೆ, ಜಂಗಮವಿಲ್ಲದೆ ಇನಿತರೊಳಗೊಂದು ಭೋಗವನಾದೊಡು ನಾನು ಭೋಗಿಸಿದೆ ನಾದಡೆ ನಿಮ್ಮಾಣೆ ನಿಂಮ ಪ್ರಮಥರಾಣೆ. ಇಂತೀ ಕ್ರಮದಲ್ಲಿ ನಡೆದಾತಂಗೆ ಗುರುವುಂಟು ಲಿಂಗವುಂಟು ಜಂಗಮವುಂಟು. ಪಾದೋದಕವುಂಟು ಆಚಾರವುಂಟು ಭಕ್ತಿಯುಂಟು. ಈ ಕ್ರಮವಿಲ್ಲದೆ ನಡೆಯುವಾತಂಗೆ ಗುರುವಿಲ್ಲ; ಲಿಂಗವಿಲ್ಲ; ಜಂಗಮವಿಲ್ಲ; ಪಾದೋದಕವಿಲ್ಲ; ಪ್ರಸಾದವಿಲ್ಲ;

CC-0. Jangamwadi Math Collection. Digitized by eGangotri

ಆಚಾರವಿಲ್ಲ; ಸದ್ಭಕ್ತಿ ಇಲ್ಲ. ಅವನ ಬಾಳುವೆ ಹಂದಿಯ ಬಾಳುವೆ ಅವನ ಬಾಳುವೆ ನಾಯ ಬಾಳುವೆ. ಅವನ ಬಾಳುವೆ ಕತ್ತೆಯ ಬಾಳುವೆ. ಅವನು ಸುರೆಮಾಂಸ ಭುಂಜಕನು ಅವನು ಸರ್ವಚಾಂಡಾಲನಯ್ಯ ಚೆನ್ನಮಲ್ಲಿಕಾರ್ಜುನ."

## ಈವಚನ ವಿವರ.

ತಾನು ಲಿಂಗಭೋಗಿಯಾಗಿ ಭೋಗಿಸುವ ಪದಾರ್ಥಗಳಲ್ಲಿ ಕೆಲವು ಸಾಮಾನ್ಯ ಭೋಗ್ಯವಿರಬಹುದು. ಉದಾಹರಣ:—ವೀಣಾಶಬ್ದಾದಿಗಳು ಹಲವರಿಂದ ಏಕಕಾಲದಲ್ಲಿ ಭೋಗ್ಯವಾಗುವುವು. ಇಂತಹವನ್ನು ಜಂಗಮ ಸಾಕ್ಷಿಯಾಗಿ ಭೋಗಿಸುವೆನು. ಹಲವು ಏಕಾತ್ಮಿಕವಾಗಿ ಭೋಗ್ಯ ವಿರಬಹುದು-ಉದಾಹರಣ ಮಜ್ಜನಾದಿಗಳು ಇಂತಹವುಗಳನ್ನು ಜಂಗಮಕ್ಕೆ ಮೊದಲೊಂದು ಮಜ್ಜನವಮಾಡಿಸಿ ತದನಂತರ ನಾನು ಮತ್ತೊಂದು ಮಜ್ಜನ ಮಾಡುವೆನೆಂಬರ್ಥ. ಅಥವಾ ತಾನು ಗೃಹಸ್ಥನಾಗತಕ್ಕುದಿದ್ದರೆ ಅಥವಾ ಗೃಹಿಣಿಯಾಗುವುದಾದರೆ ಜಂಗಮಕ್ಕೆ ತಕ್ಕ ಸ್ತ್ರೀಪರಿಗ್ರಹವ ಮಾಡಿಸಿ ತದನಂತರ ತಾನು ಪಾಣಿಗ್ರಹಣವ ಮಾಡುವೆನೆಂಬರ್ಥ

## ಪೂರ್ವಪ್ರಮಾಣಗಳು.

ಜಂಗಮವು ಜ್ಞಾನದಿಂದ ಚರಿಸುವಲ್ಲಿ ಕಾಯಕಪ್ರವೃತ್ತಿಗಳನ್ನು ಮಾಡುತ್ತಿರುವ ಭಕ್ತರು ನೀಡಿದ ಪದಾರ್ಥವನ್ನು ಕೈಕೊಂಡು ಶೇಷವನ್ನು ಅವರಿಗೆ ಪ್ರಸಾದವಾಗಿತ್ತು ಉದ್ಧರಿಸುವನು. ಭಕ್ತನು ತಾನು ಮಾಡುವ ಭೋಗಗಳನ್ನೆಲ್ಲ ಜಂಗಮಾರ್ಪಿತವಾಗಿಯೆ ಮಾಡುವುದು ಶ್ರುತ್ಯಾಗಮುಗಳಲ್ಲಿ ಪ್ರತಿಪಾದಿತವಾಗಿದೆ. "ರುದ್ರೇಣಾತ್ತಮಶ್ನಂತಿ; ರುದ್ರೇಣ ಘ್ರಾತಂಜಿಘ್ರಂತಿ; ರುದ್ರೇಣಪೀತಂ ಪಿಬಂತಿ" ವೀರಶೈವ ಗ್ರಂಥಗಳು ಪ್ರಸಾದ ಪ್ರಕರಣದಲ್ಲುದಾಹರಿಸುವ ಶ್ರುತಿ "ಜುಷ್ಟಂದೇವಾನಾಮಿದಮಸ್ತುಹವ್ಯಂ" ತೈತ್ತಿರೀಯ ಸಂಹಿತಾ ೩—೧—೪— "ಅರ್ಥಪ್ರಾಣಾದಿಕಂ ಸರ್ವಂ ಪ್ರೀತ್ಯಾಕುರ್ಯಾಜ್ಜರಾರ್ಪಿತಂ । ಚರಲಿಂಗ್ಯೈಕವೀರ; ಸ್ಯಾದನ್ಯಂಭೂಯೋಪಿನಸ್ಮರೇತ್ ॥ ಸರ್ವಂಚರಾರ್ಪಿತಂಕೃತ್ವಾ ತತ್ಪ್ರಸಾದಂ ವಿಶೇಷತಃ। ಯೋಭುಂಕ್ತೇಚರಲಿಂಗಸ್ಯ ಪ್ರಸಾದೀ ನಾನ್ಯ ಲೋಲುಪಃ" ಸೂಕ್ಷ್ಮಾಗಮ ಎಂಟನೆ ಪಟಲ ರುದ್ರರೂಪನಾದ ಜಂಗಮ ಮೂರ್ತಿಯುಂಡುದನುಣ್ಬರು. ರುದ್ರರೂಪನಾದ ಜಂಗಮ ಮೂರ್ತಿಯು ಮೂಸಿಸಿದುದನು ಮೂಸಿಸುವರು. ರುದ್ರರೂಪನಾದ ಜಂಗಮ ಮೂರ್ತಿಯು ಕುಡಿದುದನು ಕುಡಿವರು. ದೇವರೂಪ

CC-0. Jangamwadi Math Collection. Digitized by eGangotri

ರಾದ ಜಂಗಮ ಮೂರ್ತಿಗಳಿಗೆ ಈ ಪದಾರ್ಥವೆಂಬಹವಿಸ್ಸು ಪ್ರಿಯವಾಗಲಿ (ಈ ಶ್ರುತಿಗನುಸರಿಸಿ " ನೈವೇದ್ಯಂ ಪುರತೋನ್ಯಸ್ತಂ ದರ್ಶನಾತ್ಸ್ವೀಕೃತಂ ಮಯಾರಸಾಸ್ವಕ್ತ ಸ್ಯಜಿಹ್ವಾಗ್ರಾದಶ್ನಾಮಿ ಕಮಲೋದ್ಭವ ॥ ಎಲೈ ಬ್ರಹ್ಮನೆ ಮುಂದಿಟ್ಟ ನೈವೇದ್ಯವನ್ನು ದರ್ಶನದಿಂದಷ್ಟೇ ಸ್ವೀಕರಿಸುವೆನಲ್ಲದೆ ಅದರ ರಸವನ್ನಾಸ್ವಾದಿಸೆನು. ಆದರೆ ರಸಗಳನ್ನು ಭಕ್ತನ ಜಿಹ್ವೆಯ ತುದಿಯಿಂದ ಸ್ವೀಕರಿಸುವೆನು ಎಂಬ ಶಿವವಚನವಿದೆ) ಅರ್ಥವೂ ಪ್ರಾಣವೂ ಮುಂತಾದುನ್ನೆಲ್ಲ ಚರಲಿಂಗಕರ್ಪಿಸಿ ಮತ್ತೊಂದನ್ನು ನೆನೆಯಿಸದವನು ಚರಲಿಂಗವೀರನು. ಸರ್ವವನ್ನು ಚರಲಿಂಗಕರ್ಪಿಸಿ ಆಪ್ರಸಾದವನ್ನು ಅತಿ ಭಕ್ತಿಯಿಂದ (ಲಿಂಗಾರ್ಪಣಗೆಯ್ದು) ಸೇವಿಸುವನು ಚರಲಿಂಗ ಪ್ರಸಾದಿಯು.

ಈ ವೇದಾಗಮಂಗಳ ವಿಧಿಯನ್ನನುಭವಕ್ಕೆ ತಂದಾಚರಿಸಿ ಆಡಿದ ನುಡಿಯು ನಂಮ ಮಹಾದೇವಿಯಕ್ಕನದು ಆವದಾನೊಂದು ಪದಾರ್ಥವನ್ನು ಆಯಾ ಇಂದ್ರಿಯಸ್ಥವಾದ ಆಯಾಲಿಂಗಕ್ಕರ್ಪಿಸುವವೊದಲು ಆಪದಾರ್ಥವನ್ನು ಜಂಗಮಕ್ಕರ್ಪಿಸಿದಲ್ಲದೆ ಸ್ವೀಕರಿಸೆನೆಂದು ಒಡೆದು ತೋರುವ ವಚನ ತಾತ್ಪರ್ಯವು ಯಾವನೊ ಒಬ್ಬನಿಗೆ ಕಂಡಿಲ್ಲ—ಇರಲಿ !

ಪರಶಿವತಾನೆ ತನ್ನನಿಜಭಕ್ತರ ಮೋಹವನಿಕ್ಕಲೆಂನ್ನುತಂ ।
ಗುರುಪರಲಿಂಗಜಂಗಮದ ರೂಪಿನೊಳಾ ತನುಮಾನಸಾಸುವಂ ॥
ಪರಿಕಿಸೆಪೋದನಂಬಡಿಸುತಂತವರೋಳ್ತವೆತೀವಿ ನಿಲ್ಲುವೊಂದಿರು
ಪನದಾವನೋರ್ವನಿರಿವಂ ಮಣಿವಪ್ಪೆನವಂಗೆ ಸಂತತಂ ॥

ಶ್ರೀರುದ್ರಪಶುಪಕರುಣಾ ।
ಸಾರಾಮೃತವರ್ಷಪಾನಲೋಲ ಚಕೋರಂ ॥
ಧೀರಾಲ್ಲಮಪದ ಪದ್ಮಭೃಂಗೊ ।
ಳಾರಡಿಯಾ ಸಿದ್ಧರಾಮನೀಕೃತಿಪೇಳ್ದಂ ॥

ಸಮಾಪ್ತಿ.

CC-0. Jangamwadi Math Collection. Digitized by eGangotri

# ಶೋಧನಪತ್ರ.

—— ः०ः ——

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೧ | ೫ | ನವೇಂದ್ರಿಯಾ | ನೋವೇಂದ್ರಿಯಾ |
| ,, | ೧೨ | ಮಾಯಯಲ್ಲ | ಮಾಯೆಯಲ್ಲ |
| ,, | ೧೮ | ಅವತಾರವೇಯಾದ | ಅವತಾರವೇ ಆದ |
| ೨ | ೫ | ಅ | ಆ |
| ,, | ೧೩ | ವಾಗಿವೆ | ವಾಗಿಯೆ |
| ,, | ೨೧ | ಮೇದ್ಯಸ್ಯ | ಮೇಧ್ಯಸ್ಯ |
| ೩ | ೨ | ಛಾಂದೂಗ್ಯ | ಛಾಂದೋಗ್ಯ |
| ೩ | ೪ | ಹ್ಮದಿ | ಹೃದಿ |
| ೩ | ೫ | ಲಕ್ಮಣಂ | ಲಕ್ಷಣಂ |
| ,, | ೭ | ಭಸ್ಷವು | ಭಸ್ಮವೂ |
| ,, | ೧೪ | ಶಿದಧ್ಯಾನ | ಶಿವಧ್ಯಾನ |
| ,, | ೧೯ | ಗೃಂಥ | ಗ್ರಂಥ |
| ,, | ೨೮ | ಯ್ಗ್ರತ | ವ್ರತ |
| ,, | ,, | ತೀರ್ಥೀವ್ರ | ತೀರ್ಥೀಯ |
| ೪ | ೩ | ರಸ್ಯಾಪಿ | ಪರಸ್ಯಾಪಿ |
| ,, | ೧೨ | ಚಂಡಾಲನಾಗುವರು | ಚಂಡಾಲನಾಗುವನು |
| ೫ | ೬ | ಆಚರತಿತಿ | ಆಚರತೀತಿ |
| ,, | ,, | ಬ್ರಾಹ್ಮಣತೀಃ | ಬ್ರಾಹ್ಮಣಃ |
| ,, | ೧೬ | ತಪಸ್ವಿನೌರಾ | ತಪಸ್ವಿನೌ |
| ೬ | ೮ | ಸಂದರ್ಭದಲ್ಲ | ಸಂದರ್ಭದಲ್ಲಿ |
| ,, | ೧೪ | ವೈದಿಕಾರ್ಥಾನಾಂ | ವೈದಿಕಾರ್ಥಾ ನಾಂ |
| ,, | ೧೯ | ಶ್ರುತೇಃ | ಶ್ರುತೇಃ |
| ,, | ೨೫ | ಶ್ರುತಿಚೋದ್ಯತ್ವಂ | ಶ್ರುತಿಚೋದ್ಯತ್ವಂ |
| ,, | ೨೯ | ಎಲ | ಎಲ! |
| ೭ | ೨ | ಇ | ಈ |
| ೭ | ೧೦ | ಅವೈದಿಕವೆಂನರೆ | ಅವೈದಿಕವೆಂದರೆ |

CC-0. Jangamwadi Math Collection. Digitized by eGangotri

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ,, | ೧೫ | ಪ್ರಕಾಶಪಾಗದಿರುವುದು | ಪ್ರಕಾಶವಾಗದಿರುವುದು. |
| ,, | ೨೫ | ವ್ರುತಿ | ಶ್ರುತಿ |
| ೮ | ೨ | ವೈದಿಕಕರು | ವೈದಿಕರು |
| ,, | ೩ | ಬಲವಾದುಧರಿಂದಲಲು | ಬಲವಾದುದರಿಂದಲು. |
| ೧೧ | ೫ | ದೇವಿಲಿಂಗಿಯು | ದೇವಿ! ಲಿಂಗಿಯು |
| ೧೭ | ೨ | ವಾಚಂಲಕ್ಷಣ | ವಾಚಾಲಕ್ಷಣ |
| ,, | ೧೧ | ಕೇಡಹುವಂದು | ಕೆಡಹುವಂದು |
| ,, | ೧೪ | ಕಲ್ಲೊಳಗಣ್ತ | ಕಲ್ಲೊಳಗಣ |
| ೧೯ | ೧ | ಜಗತ್ರ್ರಯ | ಜಗತ್ತ್ರಯ |
| ೨೩ | ೮ | ತ್ರೈತೇಂ | ತ್ರೈತೇಷಾಂ |
| ೨೪ | ೫ | ಸತರಜಸ್ತಮೋ | ಸತ್ವರಜಸ್ತಮೋ |
| ,, | ೨೧ | ಒಂದ | ಒಂದೆ |
| ,, | ೨೪ | ಹುಟ್ಟದ | ಹುಟ್ಟಿದ |
| ,, | ೨೮ | ಉತ್ಪತ್ತಿಯಿಂದ | ವ್ಯುತ್ಪತ್ತಿಯಿಂದ |
| ೨೪ | ೨೯ | ಇರತಪ್ಪ | ಇಂತಪ್ಪ |
| ೨೭ | ೧೪ | ಲಿ ಗತಾ | ಲಿಗಿ ಗತಾ |
| ,, | ೨೦ | ಸಾಮರ್ಥ | ಸಾಮರ್ಥ್ಯ |
| ೨೮ | ೧೭ | ಜಾತೃತ್ವ | ಜ್ಞಾತೃತ್ವ |
| ೩೧ | ೧೦ | ದಂತರಂಗಲಿ | ದಂತರಂಗದಲಿ |
| ,, | ೧೩ | ಪ್ರಮೇಯನನು | ನಪ್ರಮೇಯನನು |
| ೩೨ | ೧೨ | ಪೂರ್ಣತ್ವಮಾಪ್ | ಪೂರ್ಣತ್ವಮಾಪ |
| ,, | ೧೫ | ಆವರಿಬ್ಬಸು | ಅವರಿಬ್ಬರು |
| ,, | ೩೦ | ಶಿಸುವೆಂಮ | ಶಿಸುವೆಂದು |
| ೩೮ | ೨೪ | ವ್ಯಗ್ತಯು | ಒಬ್ಬನು |
| ೪೧ | ೧೮ | ಆಲಂಮಾ | ಆಲಂಮಾ |
| ೪೩ | ೧೧ | ಜಾನಸಂಪನ್ನಾಃ | ಜ್ಞಾನಸಂಪನ್ನಾಃ |
| ೪೪ | ೧೮ | ಜ್ಯಾಡ್ಯ | ಜಾಡ್ಯ |
| ೪೫ | ೯ | ಖಾತ್ಯಾದಿ | ಜಾತ್ಯಾದಿ |
| ೪೮ | ೪ | ವೆಂದರಡನೆಯ ತಾನೆ | ವೆಂದೆರಡನೆಯ ಶಂಭು ತಾನೆ |

CC-0. Jangamwadi Math Collection. Digitized by eGangotri

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ,, | ,, | ಕೆರೆಗಟ್ಟ್ವ ಗುಡ್ಡ | ಕೆರೆಗಟ್ಟ್ವಾ ಗುಡ್ವ |
| ,, | ೧೧ | ಸ್ರೀನೀಲಕಂಠ | ಶ್ರೀನೀಲಕಂಠ |
| ,, | ೧೯ | ಮತ್ಪ್ರಭುವೇ | ಮತ್ಪ್ರಭವೇ |
| ೪೯ | ೯ | ಬಾಸ | ಭಾಸ |
| ,, | ೨೦ | ಸೂಕ್ಷ್ಮಾಗಮ | ಸೂಕ್ಷ್ಮ್ರಾಗಮ |
| ೫೬ | ೪ | ಫಲವನುಂಡು | ಫಲವನುಂಣು |
| ೬೫ | ೩ | ಇದ್ದರಿಂದ | ಇದ್ವದರಿಂದ |
| ೬೫ | ೨೯ | ಪ್ರತ್ಯಯು | ಪ್ರತ್ಯಯವು |
| ೬೭ | ೧೫ | ್ರತಿಷ್ಠಾ | ಪ್ರತಿಷ್ಠಾ |
| ೬೭ | ೨೩ | ಮೊದಲಿದ | ಮೊದಲಿನ |
| ೬೮ | ೩ | ಪರಾಜ್ಮುಖ | ಪರಾಙ್ಮುಖ |
| ೬೯ | ೨೨ | ಸದ್ಯೋಮಕ್ತಿ | ಸದ್ಯೋಮುಕ್ತಿ |
| ೬೯ | ೩೩ | ನಡಿದಿರುವನು | ನುಡಿದಿರುವನು |
| ೬೯ | ೨೩ | ಉಜ್ಜಲ | ಉಜ್ಜ್ವಲ |
| ೭೧ | ೩೪ | ಓನಮಃ | ಓಂನಮಃ |
| ೭೩ | ೩ | ನೀನೆಗೆ | ನಿನೆನಗೆ |
| ೭೬ | ೧೦ | ಕಾನೀನಸ್ಟ್ವಯ | ಕಾನೀನಸ್ತ್ವಯು |
| ೭೬ | ೧೧ | ತಸ್ಮಾನ್ನಾಹರ್ತಿ | ತಸ್ಮಾನ್ನಾರ್ಹತಿ |
| ೭೭ | ೯ | ಅಧಿಕಾಂಗಳೆಂತಲು | ಅಧಿಕಾರಿಗಳೇತಲು ಕೆಲವರು |
| ೭೮ | ೨ | ಬರಯುಲಿಲ್ಲ | ಬರೆಯುಲಿಲ್ಲ |
| ೭೯ | ೯–೨೬ | ವಿದ್ಯಯು | ವಿದ್ಯೆಯು |
| ೭೯ | ೧೫–೨೧ | ವಿದ್ಯಯನ್ನು | ವಿದ್ಯೆಯನ್ನು |
| ೭೯ | ೧೮ | ವಿವರಿಸಿರುವದು | ವಿವರಿಸಿರುವರು |
| ೮೦ | ೧೯ | ರಬಹುದೊ | ಸಬಹುದೊ |
| ೮೩ | ೩೦ | ಲಂಗತತ್ತ್ವ | ಲಿಂಗತತ್ತ್ವ |
| ೮೫ | ೬ | ವೇಷಭ್ಯದಯಂ | ವೇಷಭೃದಯಂ |
| ೮೫ | ೧೧ | ಹೋಯಿಲು | ಹೊಯಿಲು |
| ೮೬ | ೧೬ | ವೈತ್ಯುಪನಿಷತ್ | ವೈತ್ರ್ಯುಪನಿಷತ್ |
| ೮೭ | ೨೧ | ರಿಪ್ರಿಯಾಃ | ಸ್ಪ್ರಿಯಾಃ |

CC-0. Jangamwadi Math Collection. Digitized by eGangotri

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೮೭ | ೨೪ | ಪಿಳಸುವ | ವೆಳಸುವ |
| ೮೯ | ೧೫ | ವಿಶ್ವಸನೀಯ | ಸ್ಪಷ್ಟ |
| ೯೦ | ೧೦ | ಗ್ರಾಹಕ | ಗ್ರಾಹಕಃ |
| ೯೦ | ೧೯ | ಪ್ರಣಿಕ್ಷೆಪ್ಯ | ಪ್ರಣಿಕ್ಷೆಪ್ಯ |
| ೯೦ | ೨೦ | ಸ್ಥಾಪಯೇಚ್ಛೀಪ್ಯೇ | ಸ್ಥಾಪಯೇಚ್ಛಿಪ್ಯೇ |
| ೯೧ | ೪ | ಯಲ್ಲದೆ | ಆದ ಅಲ್ಲದೆ |
| ೯೩ | ೨೧ | ಎಂ | ಎಂಬ |
| ೯೩ | ೨೭ | ಮಂತ | ಮಂತ್ರ |
| ೯೪ | ೨ | ಏಂಬುದೈಸೆ | ಎಂಬುದೈಸೆ |
| ೯೫ | ೨೫ | ಜಂಗಮತತ್ತ್ವವವು | ಜಂಗಮತತ್ತ್ವವು |
| ೯೬ | ೨ | ಸಂಹಾಪರ | ಸಂಹಾರ |
| ೯೭ | ೧೫ | ಸರ್ವಮಹತ್ವ | ಸರ್ವವಹತ್ವ |

---

SRI JAGADGURU VISHWARADHYA
JNANA SIMHASAN JNANAMANDIR
LIBRARY.
Jangamwadi Math, VARANASI,
Acc. No. 2222
561

CC-0. Jangamwadi Math Collection. Digitized by eGangotri

